

ತೇಲಿಸೋ ಇಲ್ಲ ಮುಳುಗಿಸೋ
ನಿನ್ನ ಕಾಲಿಗೆ ಬಿದ್ದೆನೋ ಪರಮ ಕೃಪಾಳೊ

ಸುತಿಸುತ ಧನದಾಸೆ ಎಂದೆಂಬ ಮೋಹದಿ
ಹಿತದಿಂದ ಆತಿನೊಂದು ಬೆಂಡಾದೆನೋ
ಗತಿ ಕೊಡುವರ ಕಾಣೆ ಮತಿಯ ಪಾಲಿಸೊ ಲಕ್ಷ್ಮೀ
ಪತಿ ನಿನ್ನ ಚರಣದ ಸ್ಮರಣೆಯಿತ್ತೆನಗೆ

ಜರರೋಗ ದಾರಿದ್ರ್ಯ ಕಶ್ಮಲವೆಂತೆಂಬ
ಶರಧಿಯೊಳಗೆ ಬಿದ್ದು ಮುಳುಗಿದೆನೋ
ಸ್ಥಿರವಲ್ಲ ದೇಹವು ನೆರೆ ನಂಬಿದೆ ನಿನ್ನ
ಕರುಣಾಭಯವಿತ್ತು ಪಾಲಿಸೋ ಹರಿಯೆ

ದೋಷವುಳ್ಳವ ನಾನು ಭಾಷೆಯುಳ್ಳವ ನೀನು
ಮೋಸ ಹೋದೆನೊ ಭಕ್ತಿ ರಸವ ಬಿಟ್ಟು
ಶೇಷಶಯನ ಶ್ರೀಪುರಂದರ ವಿಠಲನೆ
ದಾಸರ ಸಂಗವಿತ್ತು ಪಾಲಿಸೋ ಹರಿಯೇ

ಪುರಂದರದಾಸರ

ಸಂದರ್ಶಿಸಿ ! ಅನುಗ್ರಹೀತರಾಗಿರಿ ! !

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಪವಿತ್ರೋತ್ಸವ

ದಿನಾಂಕ **18—8—83** ರಿಂದಂದ **21-8-83** ವರೆಗೆ

| | | |
|---|---|---|
| **18–8–83** | ಗುರುವಾರ | ಅಂಕುರಾರ್ಪಣೆ |
| **19–8–83** | ಶುಕ್ರವಾರ | ಪವಿತ್ರ ಪ್ರತಿಷ್ಠೆ |
| **20–8–83** | ಶನಿವಾರ | ಪವಿತ್ರ ಸಮರ್ಪಣೆ |
| **21–8–83** | ಭಾನುವಾರ | ಪೂರ್ಣಾಹುತಿ |

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ಇತರ ತಿರುಪತಿಯ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6–30, ಬೆಳಗ್ಗೆ 10–30, ಸಂಜೆ 4–30

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

ತಿ.ತಿ.ದೇ.



ಸಂಪುಟ ೧೪] ಜುಲೈ ೧೯೮೩ [ಸಂಚಿಕೆ ೨

# ವಿಷಯಸೂಚಿ




ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥




ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರ
ಆಗಲಿ ಮಹಾಪ್ರಸಾದವೆಂದೆನಯ್ಯ
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ ! ಗುಹೇಶ್ವರ
ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನು

– ಅಲ್ಲಮಪ್ರಭು

'ಗುರು' ಶಬ್ದ ಈಚೆಗೆ ಲಘುವಾಗಿರುವಷ್ಟು ಹಿಂದೆಂದೂ ಆಗಿರಲಿಲ್ಲವೆನ್ನಿಸುತ್ತದೆ. 'ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ......' ಎಂಬ ಮಾತು ಮರೆಯಾಗಿ 'ಎಲ್ಲೂ ಇಲ್ಲದವನಿಗೆ......' ಎಂಬ ನಾಣ್ಣುಡಿ ಹೊರಟಿರುವುದೇ ಇದಕ್ಕೆ ಪ್ರತ್ಯಕ್ಷ ನಿದರ್ಶನ.

ಗುರುವನ್ನು ದೈವ ಎಂದರು ನಮ್ಮವರು. ತ್ರಿಮೂರ್ತಿ ಸ್ವರೂಪ ಎಂದರು. ತಂದೆ ಎಂದರು. 'ವರ್ಣಮಾತ್ರಂ ಕಲಿಸಿದಾತಂ ಗುರು' ಎಂದು ಗೌರವಿಸಿದ್ದೂ ಉಂಟು. ಕಾರಣಗಳಿಲ್ಲದಿಲ್ಲ, ಇಹಲೋಕದಲ್ಲಿ ಧರ್ಮ ಮೂಲವಾದ ಅರ್ಥ ಕಾಮಗಳ ಬಗ್ಗೆ ಖಚಿತವಾದ ಸ್ಪಷ್ಟವಾದ ಮಾರ್ಗದರ್ಶಿಯಾಗಿಯೂ, ಮೋಕ್ಷೋಪಾಯ ಸಾಧನೆಯಲ್ಲಿ ದೀಪಧಾರಿಯಾಗಿಯೂ ನಡೆಸುವವನಾದ್ದರಿಂದ ಅವನನ್ನು ತಾಯಿ, ತಂದೆ, ಮಿತ್ರ, ದೈವ – ಮೊದಲಾದ ಎಲ್ಲ ಗೌರವಾರ್ಹ ನಮಸ್ಕಾರಾರ್ಹ ಸ್ಥಾಯಿಗಳಲ್ಲಿ ಚಿತ್ರಿಸಿದ್ದರು. ಕೇಳಿಲ್ಲವೇ 'ಗುರುವಿನ ಗುಲಾಮನಾಗದನಕ ದೊರಕದಣ್ಣ ಮುಕುತಿ'. ಈ ಗುರು ಶಿಷ್ಯ ಸಂಬಂಧ ಬರೀ ವ್ಯಾವಹಾರಿಕ ಉದರಂಭರಣ ಮಾರ್ಗವಲ್ಲದೆ ಶಿಷ್ಯನೊಡನೆ ತಾನೂ ಉದ್ಧಾರವಾಗುವ ನೈತಿಕ ಮೌಲ್ಯವುಳ್ಳದ್ದು. ಎಂತಲೇ ವ್ಯಾಸರು ವೇದಗಳನ್ನು ಕ್ರಮಬದ್ಧಗೊಳಿಸಿ, ಮಹಾಭಾರತದಲ್ಲಿ ಧರ್ಮಾರ್ಥಕಾಮ ಮೋಕ್ಷಗಳ ಹಾದಿಯನ್ನು ಸುಂದರವಾಗಿ ಬೆಳಕಿಗೆ ಹಿಡಿದಾಗ ವೇದವ್ಯಾಸರೆಂದೂ ಗುರುವೆಂದೂ ಅನ್ನಿಸಿದರು. ಅವರ ಹೆಸರಿನಲ್ಲಿ ಆಚರಿಸುವ ಗುರುಪೂರ್ಣಿಮೆ – ವ್ಯಾಸಪೂರ್ಣಿಮೆ ಗುರುವಿಗೆ ಗೌರವ ತೋರಿಸುವ ಸಂಕೇತ ಮಾತ್ರ. ಶಿಷ್ಯ ತನ್ನ ಇತಿಮಿತಿಗಳನ್ನು ಅರಿತು ಅದರ ವ್ಯಾಪ್ತಿಗಳನ್ನು ಹಿಗ್ಗಿಸಿಕೊಳ್ಳಲು, ಗುರು ತೋರಿದ ಗುರಿಯನ್ನು ಸೇರಲು ಪ್ರಯತ್ನಿಸುವ ಆಸಕ್ತಿಯ, ಪ್ರವೃತ್ತಿಯ ಸಂಕೇತ. ಪ್ರವೃತ್ತಿ ಎನ್ನಲಾಗಿದೆ, ನಿವೃತ್ತಿಯನ್ನೂ ಗುರು ತೋರಿಸಬಲ್ಲ. ಅದೂ ಗುರಿಯೇ ಆಗಬಹುದು.

ಒಟ್ಟಿನಲ್ಲಿ ಅಜ್ಞಾನವನ್ನು, ಅನವಧಾನವನ್ನು, ಅಸಮಾಧಾನವನ್ನು ದೂರೀಕರಿಸಿ ತನ್ನತನದ ಅಭಿಜ್ಞಾನವನ್ನು ತಂದುಕೊಡುವವನು ಗುರು. ಅಂತಹ ಗುರುತರ ವ್ಯಕ್ತಿಗೆ–ವಿಷಯಕ್ಕೆ–ನಮಸ್ಕರಿಸಿ ಆಚರಿಸಿ ಮುಂದುವರೆಯುವುದು ಮಾನವನ ಕರ್ತವ್ಯ.

॥ ಶ್ರೀ ಗುರುಭ್ಯೋ ನಮಃ

# ವೃಕ್ಷರೂಪೀ ನರಸಿಂಹದೇವರು

ಭೂಭಾರಹರಣಕ್ಕಾಗಿ ಭಗವಂತನ ದಶಾವತಾರಗಳನ್ನು ಧರಿಸಿದನಷ್ಟೇ. 'ವಿನೂತನ ಕಥನಕಾರಣ' ಎಂದು ಕುಮಾರ ವ್ಯಾಸ ವರ್ಣಿಸಿದಂತೆ ಆತನ ಪ್ರತಿಯೊಂದು ಅವತಾರವೂ ಹೊಸತಾಗಿದ್ದು ಹೋಲಿಕೆಯಿಂದ ದೂರವಾಗಿವೆ. ಆತನ ಈ 'ನಾಟಕ'ದ ದಶಾಂಕಗಳಲ್ಲಿ ಶ್ರೀ ನರಸಿಂಹಾವತಾರವು ಬಹಳ ರೋಮಾಂಚಕ. ಅದರ ಕಥೆ ಸಾಮಾನ್ಯವಾಗಿ ಎಲ್ಲರಿಗೂ ತಿಳಿದದ್ದೆ.

ಕಂಬದಿಂದ ಉದ್ಭವವಾದ್ದರಿಂದ 'ಸ್ತಂಭ ರೂಪೀ ನರಸಿಂಹ' ಎಂಬುದು ವಾಡಿಕೆಯ ಮಾತು. ಆದರೆ 'ವೃಕ್ಷರೂಪೀ ನರಸಿಂಹ' ಎಂಬುದನ್ನು ಕೆಲವರೇ ಕೇಳಿರುವರು, ನೋಡಿರುವರು. ಕಲ್ಬುರ್ಗಿ ನಗರದಿಂದ ೯೦ ಮೈಲಿ ದೂರದಲ್ಲಿರುವ ಶ್ರೀ ಕೊಪ್ಪರ ಎಂಬ ಗ್ರಾಮದಲ್ಲಿ ವೃಕ್ಷರೂಪೀ ನರಸಿಂಹನ ದರ್ಶನವನ್ನು ಪಡೆಯಬಹುದು. ಇಡೀ ಭಾರತದಲ್ಲಿಯೇ ಇದು ಏಕೈಕ ದೇವಸ್ಥಾನ. ವಿಜಾಪುರಜಿಲ್ಲೆಯ ಜಮಖಂಡಿ ತಾಲ್ಲೂಕಿನಲ್ಲಿ ಶ್ರೀ ಶೂರ್ಪಾಲಿ ನರಸಿಂಹ ಕ್ಷೇತ್ರವೊಂದಿದ್ದು, ಅಲ್ಲಿಯೂ ವೃಕ್ಷದಲ್ಲಿ ನರಸಿಂಹನಿದ್ದು ವಿಗ್ರಹ ರೂಪದಲ್ಲಿ ಪ್ರಕಟವಾಗಿದ್ದಾನೆ. ಆದರೆ ಕೊಪ್ಪರದಲ್ಲಿ ವೃಕ್ಷದಲ್ಲಿಯೇ ಸಾಲಿಗ್ರಾಮಗಳು ಉದ್ಭವಿಸಿ ಅದರಲ್ಲಿಯೇ ನೃಸಿಂಹದೇವರು ಸ್ವಯಂ ವ್ಯಕ್ತನಾಗಿದ್ದು, ಇದು ಏಕೈಕ ದೇವಸ್ಥಾನವೆಂದು ಶ್ರೀ ಸ್ಕಾಂದ ಪುರಾಣದಲ್ಲಿಯೂ ಉಲ್ಲೇಖಿಸಲಾಗಿದೆ. ಈ ಗ್ರಾಮವು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿ ಕೃಷ್ಣಾ ತಟದಲ್ಲಿದೆ.

ಸಾದಾ ಹಾಗೂ ಸರಳ ಶೈಲಿಯಲ್ಲಿ ಕಟ್ಟಲ್ಪಟ್ಟ ಗುಡಿ ತುಂಬಾ ಚಿಕ್ಕದಾಗಿದ್ದರೂ, ಹೆಚ್ಚು ಸುಂದರವೂ ರಮಣೀಯವೂ ಆದದ್ದು. ಅದಕ್ಕೆ ಅದರ ವಾತಾವರಣವೇ ಸಾಕ್ಷಿ. ಎತ್ತರವಾದ ಅಶ್ವತ್ಥವೃಕ್ಷವನ್ನೊಳಗೊಂಡ ಚಿಕ್ಕ ಗರ್ಭಗುಡಿ (ಆ ವೃಕ್ಷವೇ ಮೂಲದೇವರು; ಅದಕ್ಕೇ ಎಲ್ಲಾ ಪೂಜೆ), ಸುತ್ತಲೂ ವಿಶಾಲವಾದ ಕಲ್ಲುಕಟ್ಟೆ, ಕೆಳಗೆ ಶ್ರೀ ನರಸಿಂಹನ ಪಾದಾಭಿಷೇಕಮಾಡುತ್ತಿರುವ ತಂಪಾದ, ಇಂಪಾದ, ಸೊಬಗಿನ ಕೃಷ್ಣೆ, ಸುತ್ತಲೂ ನಿರ್ಜನಪ್ರದೇಶದಿಂದ ಆವೃತವಾದ ಏಕಾಂತ– ಇವು ಎಂಥವನನ್ನೂ ಮುಗ್ಧಗೊಳಿಸುತ್ತವೆ. ಶ್ರೀ ಸ್ಕಾಂದ ಪುರಾಣದಲ್ಲಿ ನಾರದ ಮಹರ್ಷಿಗಳು ಕೃಷ್ಣಾ ನದಿಯ ಮಹಿಮೆಯನ್ನು ವಿವರಿಸುತ್ತ ಅದರ ದಡದಲ್ಲಿರುವ ಕ್ಷೇತ್ರವನ್ನು ವರ್ಣಿಸುತ್ತಾ ಕೊಪ್ಪರಕ್ಷೇತ್ರದ ಬಗ್ಗೆ ತಿಳಿಸುತ್ತಾರೆ.

ಈ ಕ್ಷೇತ್ರಕ್ಕೆ ಮೂಲವಾಗಿ 'ಕಾರ್ಪರ ಕ್ಷೇತ್ರ'ವೆಂದು ಹೆಸರು. ಶ್ರೀ ಕಾರ್ಪರಋಷಿಗಳು ದೀರ್ಘಕಾಲ ತಪಸ್ಸುಮಾಡಿ ಈ ಸ್ಥಳದಲ್ಲಿ ಶ್ರೀ ನೃಸಿಂಹದೇವರನ್ನು ಪ್ರಸನ್ನ ಪಡಿಸಿಕೊಂಡ ಜಾಗೃತ ಕ್ಷೇತ್ರವಿದು. ಪ್ರತೀ ವರ್ಷ ಕರ್ಕಾಟಕ ಸಂಕ್ರಮಣದ ಪವಿತ್ರ ದಿನದಂದು ಶ್ರೀ ಬ್ರಹ್ಮರುದ್ರಾದಿಗಳು ಜಲ ರೂಪದಿಂದ ಇಲ್ಲಿಗೆ ಬಂದು ಶ್ರೀ ನರಸಿಂಹನ ಪೂಜೆ ಮಾಡುತ್ತಾರೆ, ಆಗ ಕೃಷ್ಣಾನದಿ ಮಹಾಪೂರದಿಂದ ಬಂದು ಗುಡಿಯ ಸುತ್ತಲೂ ಆವರಿಸಿ ಗರ್ಭಗೃಹವನ್ನು ಪ್ರವೇಶಿಸುತ್ತದೆ. ಆಗ ಮನುಷ್ಯರಾರೂ ಇಲ್ಲಿಗೆ ಪೂಜೆಗೆ ಬರಲು ಶಕ್ಯವಿಲ್ಲ. ಇಂತಹ ಪವಿತ್ರ ಕ್ಷೇತ್ರ ಇದು ಎಂಬುದೇ ನಾರದರ ವಾಕ್ಯ.



ಈಗಿನ ಅರ್ಚಕರಾದ ಶ್ರೀ ಗಿರಾಚಾರ್ಯ. ಶ್ರೀ ನಾರಾಯಣಾಚಾರ್ಯರು ಸೋದರರು. ಇವರ ಪೂರ್ವಜರಾದ ಶ್ರೀ ನಾರಪ್ಪಯ್ಯ, ಒಮ್ಮೆ ತಿರುಪತಿಗೆ ಕಾಲ್ನಡಿಗೆಯಲ್ಲಿಯೇ ಹೋದಾಗ ಶ್ರೀ ವೆಂಕಟರಮಣನು ಅವರಿಗೆ ಸ್ವಪ್ನದಲ್ಲಿ "ಇಲ್ಲಿ ನಿಮಗೆ ದರ್ಶನವಿಲ್ಲ. ಮರಳಿ ನಿಮ್ಮ ಗ್ರಾಮಕ್ಕೆ ಹೋಗಿ. ಅದು ಪವಿತ್ರ ಕ್ಷೇತ್ರ. ಅಲ್ಲಿಯೇ ನಾನು ವ್ಯಕ್ತನಾಗಿ ವಾಸಿಸುತ್ತೇನೆ. ಈಗ ನಿಮ್ಮ ಹಿಂದೆಯೇ ಗೋರೂಪದಲ್ಲಿ (ಹಸುವಾಗಿ) ಹಿಂಬಾಲಿಸುತ್ತೇನೆ, ಹಿಂದಿರುಗಿ ನೋಡಬೇಡಿ" ಎಂದು ಹೇಳಿದನಂತೆ, ಅನೇಕ ದಿನಗಳ ಪ್ರವಾಸದ ಮೇಲೆ, ಕಾರ್ಪರಕ್ಷೇತ್ರಕ್ಕೆ ತಲುಪುತ್ತಿದ್ದಂತೆ ಗೋವಿನ ಕಾಲ್ಗೆಜ್ಜೆಗಳ ಶಬ್ದ ಕೇಳಿದಂತಾಗಿ, ನಾರಪ್ಪಯ್ಯನವರು ಹಿಂದಿರುಗಿ ನೋಡಲು ಸುಂದರ ಶಿಲೆಯೊಂದರಮೇಲೆ ಶ್ರೀ ವೆಂಕಟರಮಣನು ಒಡಮೂಡಿದ್ದು, ಪಕ್ಕದಲ್ಲಿಯೇ ಅಶ್ವತ್ಥ ಸಸಿಯೊಂದು ವೊಳಕೆಯಾಗಿದ್ದಿತ್ತು. ಅವೆರಡಕ್ಕೂ ಅವರು, ಜನರಿಂದ ದಾನವಾಗಿ ಬಂದ ಗೋವುಗಳಿಂದ ಕ್ಷೀರಾಭಿಷೇಕ, ಪೂಜೆ ಮಾಡುತ್ತಿದ್ದರು. ಕಾಲಕ್ರಮೇಣ ಸಸಿ ಬೆಳೆದು ದೊಡ್ಡ ಮರವಾಯಿತು.

ಆಗ ವಿಜಾಪುರದ ಅರಸ ಆದಿಲ್‌ಶಹ ತನ್ನದೇ ಸೀಮೆಯಾದ ಈ ಕ್ಷೇತ್ರಕ್ಕೆ ಸಂಚರಿಸುತ್ತಾ ಬಂದ. ಅವನಿಗೆ ರಾತ್ರಿ ಸ್ವಪ್ನವಾಯಿತು. "ಈ ಮರದಲ್ಲಿ ದೇವರ ಸನ್ನಿಧಾನವಿದೆ ನೀನು ಇದಕ್ಕೆ ಗುಡಿ ಕಟ್ಟಿಸಿ ಪೂಜೆ ಸಲ್ಲಿಸು, ನಿನ್ನ ಕಾರ್ಯಗಳೆಲ್ಲವೂ

ಚಿತ್ರ, ಲೇಖನ :
**ಶ್ರೀ ಬಿ. ಶ್ಯಾಮಸುಂದರ**

ಸಿದ್ಧಿಸುವುವು, ನಿನಗೆ ಯೋಗ್ಯಪುತ್ರನು ಜನಿಸುವನು" ಎಂದು ಹೇಳಿದಂತಾಯಿತು. ಆ ಮೇರೆಗೆ ಆದಿಲ್‌ಶಹನು ಭಕ್ತಿ ಶ್ರದ್ಧೆಗಳಿಂದ ಗುಡಿ, ಸತ್ರಗಳನ್ನು ಕಟ್ಟಿಸಿ, ದೂರದಲ್ಲಿಯೇ ಸಿಂತು ಪೂಜೆ ಸಲ್ಲಿಸಿದನಂತೆ. ಆತನ ಅಭೀಷ್ಟಗಳೆಲ್ಲವೂ ಈಡೇರಿದ್ದು, ಆದಿಲ್‌ಶಹನ ಇತಿಹಾಸದಲ್ಲಿ ಇದರ ದಾಖಲೆ ಇದೆ. ಮಠದ ಪಕ್ಕದಲ್ಲಿಯೇ ಶ್ರೀ ವೆಂಕಟರಮಣನ ಸ್ವಯಂ ವ್ಯಕ್ತ ವಿಗ್ರಹವನ್ನು ಪ್ರತಿಷ್ಠಾಪಿಸಲಾಯಿತು. ಆದ್ದರಿಂದ ಶ್ರೀ ನರಸಿಂಹನ ಒಕ್ಕಲಿನವರು ತಿರುಪತಿಗೆ ಒಂಟಿಯಾಗಿ ಹೋಗಬಾರದೆಂದು ಪ್ರತೀತಿ.

ಕಾಲಾನುಕ್ರಮದಲ್ಲಿ ಆ ಅಶ್ವತ್ಥ ವೃಕ್ಷವು ತನ್ನ ವೃದ್ಧಾಪ್ಯ ಸಮೀಪಿಸಿದಂತೆ ಒಣಗಲಾರಂಭಿಸಿ, ಅದರ ಒಂದೊಂದು ಶಾಖೆಯು ಮುರಿದು ಬೀಳುತ್ತಿದ್ದು, ಅದರೊಳಗಿಂದ ನೂರಾರು ಸಾಲಿಗ್ರಾಮಗಳು ಹೊರಬಿದ್ದವು. ಆಗಿನ ಅರ್ಚಕರು, ಇತರರು ಭಯಗ್ರಸ್ತರಾದರು. ಕೊನೆಗೆ ವೈಶಾಖಶುದ್ಧ ದ್ವಾದಶಿ ದಿನದಿಂದಾರಂಭಿಸಿ, ಮರುದಿನ ತ್ರಯೋದಶಿ (ಶ್ರೀ ನೃಸಿಂಹಜಯಂತಿಯಂದು) ವೃಕ್ಷದ ಬಡ್ಡಿಯಿಂದ ೫ ಕಿಲೋಗ್ರಾಂ ಭಾರದ ದೊಡ್ಡ ಸಾಲಿಗ್ರಾಮವೊಂದು ಹೊರಬಂದಿತು. ಅದರಮೇಲೆ ಶ್ರೀ ನರಸಿಂಹನು ಕಣ್ಣಿಗೆ ಚೆನ್ನಾಗಿ ಕಾಣುವ ಹಾಗೆ ಒಡಮೂಡಿದ್ದು ಎಂಟು ಭುಜಗಳು, ಎಲ್ಲಾ ಆಯುಧಗಳೊಂದಿಗೆ ಉಗ್ರರೂಪಿಯಾಗಿ ದ್ದಾನೆ.ಈಸಾಲಿಗ್ರಾಮಕ್ಕೂ, ಅಶ್ವತ್ಥವೃಕ್ಷದ ಬಡ್ಡೆಗೂ ಎಲ್ಲ ಅಲಂಕಾರ, ಪೂಜೆ ನಡೆಯುತ್ತದೆ. ಉಳಿದ ಸಹಸ್ರಾರು ಸಾಲಿಗ್ರಾಮಗಳನ್ನು ಗೋಡೆಯಲ್ಲಿ ಹಾಕಿ ಪೀಠ ರಚಿಸುವಂತೆ ಸ್ವಪ್ನಾದೇಶವಾಗಲು ಅದರಂತೆಯೇ ಕಟ್ಟಿದ ಗರ್ಭಗುಡಿಯು ಕಾಣಿಸುವುದು. ಅಶ್ವತ್ಥವೃಕ್ಷದ ಹೊಸ ಸಸಿಯೊಂದುದ್ಭವಿಸಿ ಅದೇ ಮರವಾಗುವ ಈ ಕಾಲಚಕ್ರಾನುಸಾರಿತ ಘಟನೆಯು ನಡೆಯುತ್ತಲೇ ಇದೆ. ಭಕ್ತಾದಿಗಳು, ದೊಡ್ಡ ಮಠಾಧೀಶರು, ಈ ವೃಕ್ಷವ ಜೂರುಗಳನ್ನಿಟ್ಟುಕೊಂಡು ಪೂಜೆ ಮಾಡುತ್ತಿದ್ದಾರೆ.

೧೫ನೆ ಶತಮಾನದಲ್ಲಿ, ಒಮ್ಮೆ ಚಾತುರ್ಮಾಸವನ್ನಾಚರಿಸಲು ಮಂತ್ರಾಲಯದ ಯತೀಂದ್ರರಾದ ಶ್ರೀ ವಿಭುದೇಂದ್ರ ತೀರ್ಥರು, ತಮ್ಮ ಶಿಷ್ಯ ಲಕ್ಷ್ಮೀನಾರಾಯಣ ಮುನಿಯೊಂದಿಗೆ (೧೨ ವರ್ಷದ ಬಾಲಕ) ಕೊಪ್ಪರದಲ್ಲಿ ತಂಗಿದ್ದರು. ಅದೇ ಸಮಯದಲ್ಲಿ ಉತ್ತರಾದಿಮಠಾಧೀಶರಾದ ಶ್ರೀ ರಘುನಾಥ ತೀರ್ಥರು ಸಂಚರಿಸುತ್ತ ಅಲ್ಲಿಗೆ ಬಂದರು. ತೇಜಃ ಪುಂಜವಾಗಿ ಕಾಣುತ್ತಿದ್ದ ಬಾಲ ಮುನಿಯಮೇಲೆ ಅವರ ದೃಷ್ಟಿ ಹರಿದು ಆತನೊಂದಿಗೆ ಶಾಸ್ತ್ರಾರ್ಥ ಮಾಡಿದರು. ಆ ವಯಸ್ಸಿನಲ್ಲಿಯೇ ಬಾಲಕನ ಮೇಧಾಶಕ್ತಿಯನ್ನು, ಪಾಂಡಿತ್ಯವನ್ನು ಕಂಡು ರಘುನಾಥ ತೀರ್ಥರು ಪ್ರಶಂಸಿಸುತ್ತಾ ಆತನಿಗೆ "ನಾವು ಶ್ರೀಪಾದಂಗಳಾದರೆ, ನೀವು ಶ್ರೀಪಾದರಾಜರು" ಎಂದು ಹೇಳಿದರು. (ಶ್ರೀ ಹಾ. ವೆಂ ನಾಗರಾಜರಾಯರು ತಮ್ಮ ಪುಸ್ತಕ 'ಶ್ರೀಪಾದರಾಜರು' ಎಂಬುದರಲ್ಲಿ ಈ ವಿಷಯವನ್ನು ಚೆನ್ನಾಗಿ ಸ್ಪಷ್ಟೀಕರಿಸಿದ್ದಾರೆ.) ಹೀಗಾಗಿ ಮುಳಬಾಗಿಲಿನ ಯತೀಂದ್ರರ ಬಿರುದು ಶ್ರೀ ಕೊಪ್ಪರ ನರಸಿಂಹನ ಸನ್ನಿಧಿಯಲ್ಲಿ ಹೇಗೆ ಲಭಿಸಿತು, ಮುಂದೆ ಅವರೇ ದಾಸಸಂಥದ ಉನ್ನತ ಕಾಲಕ್ಕೆ ಹೇಗೆ ನಾಂದಿಯಾದರು ಎಂಬುದೂ ಸ್ಪಷ್ಟವಾಗುತ್ತದೆ. ಮುಳಬಾಗಿಲಿನ ನರಸಿಂಹ ತೀರ್ಥ ನಾಮಕರಣಕ್ಕೂ ಅದೇ ಕಾರಣ ಎಂಬುದು ಪಂಡಿತರ ಅಭಿಮತ.

ಶ್ರೀ ಕೊಪ್ಪರ ನರಸಿಂಹನ ಕಟಾಕ್ಷದಿಂದಲೇ ಸತ್ಯಾನಂದ ಯತಿಗಳ ಜನನವಾಗಿದ್ದು; ಸತ್ಯಧರ್ಮರು (ಹೊಳೆಹೊನ್ನೂರು) ದರ್ಶನ ಪಡೆದು ಪದಕದೊಂದಿಗೆ ಮುತ್ತಿನ ಹಾರವನ್ನರ್ಪಿಸಿದ್ದು; ಮಹಾಜ್ಞಾನಿಗಳಾದ ಶ್ರೀ ಜನಾರ್ಧನ ಸ್ವಾಮಿಗಳು ನಿಂದೆಗೊಳಗಾಗಿ ತಮ್ಮ ಹಿಂದಿನ ದಿನದ ತಂಗಳ ಬುತ್ತಿ ಬಿಸಿಯಾಗಿದ್ದನ್ನು ತೋರಿಸಿದ್ದು, — ಇವು ಆ ಮೋದಕಪಾಣಿಯ ಸಹಸ್ರಾರು ಲೀಲೆಗಳಲ್ಲಿ ಕೆಲವುಮಾತ್ರ.

ಈ ವೃಕ್ಷರೂಪೀ ನರಸಿಂಹ, ಕರ್ನಾಟಕದ ಸಪ್ರಸಿದ್ಧ ಮನೆತನಗಳ ಕುಲದೇವರಾಗಿದ್ದು ಅವರೆಲ್ಲರೂ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಗುಡಿಯ ಜೀರ್ಣೋದ್ಧಾರಕ್ಕಾಗಿ, ಪರಂಪರೆಗಾಗಿ, ವಿಶೇಷವಾಗಿ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿದ್ದ ದಿವಂಗತ ಶ್ರೀ ಬಿ. ಅಶ್ವತ್ಥರಾಯರು, ದಿವಂಗತ ಶ್ರೀ ಜನಾರ್ಧನರಾವ ದೇಸಾಯಿಯವರು ಇವರಲ್ಲಿ ಸ್ಮರಣೀಯರು.

ಶ್ರೀ ಕೃಷ್ಣವೇಣೀ ತೀರ ಸಂಸ್ಥರ
ಕಾರ್ಪರ ಗ್ರಾಮ ವಾಸನಂ ।
ತತ್ತೀರೇ ಪಿಪ್ಪಲಸ್ಥಂ
ಶ್ರೀ ನರಸಿಂಹಂ ಮನಸಾ ನಮೇ ॥

(ಮುಂದುವರಿದದ್ದು)

# ಶ್ರೀಮದ್ಭಗವದ್ಗೀತೆ

## ೨ ನೆಯ ಅಧ್ಯಾಯ

ನೇಹಾಭಿಕ್ರಮನಾಶೋಽಸ್ತಿ
ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ
ತ್ರಾಯತೇ ಮಹತೋ ಭಯಾತ್ ॥ 40

ಇದರ ಆರಂಭ ಮಾತ್ರವೂ ವ್ಯರ್ಥವಲ್ಲ. ಇದರಲ್ಲಿ ದೋಷವುಂಟಾಗುವುದಿಲ್ಲ. ಈ ಧರ್ಮದ ಸ್ವಲ್ಪಾಚರಣೆ ಕೂಡ ಹಿರಿಯ ಪಾತಕದಿಂದ ಪಾರುಮಾಡುತ್ತದೆ.

ವ್ಯವಸಾಯಾತ್ಮಿಕಾ ಬುದ್ಧಿಃ
ಏಕೇಹ ಕುರುನಂದನ ।
ಬಹುಶಾಖಾ ಹ್ಯನಂತಾಶ್ಚ
ಬುದ್ಧಯೋಽವ್ಯವಸಾಯಿನಾಮ್ ॥ 41

ಅರ್ಜುನ, ಈ ಆತ್ಮಜ್ಞಾನದ ಸಾಧನೆಗಳ ಬಗೆಗೆ ತತ್ತ್ವನಿರ್ಣಯವುಳ್ಳವರ ವಿಚಾರ ಒಂದೇ ಬಗೆಯಾಗಿರುವುದು. ವಿಚಾರದ ನೆಲೆ ಕಾಣದ ಚಪಲ ಬುದ್ಧಿಗೆ ಮಾತ್ರವೇ ನೂರಾರು ಕವಲುದಾರಿಗಳು.

ಯಾಮಿಮಾಂ ಪುಷ್ಪಿತಾಂ
ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ
ನಾನ್ಯದಸ್ತೀತಿ ವಾದಿನಃ ॥ 42

ಅರ್ಜುನ, ದಡ್ಡರು ವೇದದ ಮೇಲುನೋಟಕ್ಕೆ ಕಾಣುವ ಹೂವಿನಂಥ ಮಾತಿಗೇ ಮರುಳಾಗುತ್ತಾರೆ. ಅದರಾಚೆಗಿರುವ ಭಗವತ್‌ತತ್ತ್ವವೆಂಬ ಹಣ್ಣು ಅವರಿಗೆ ಕಾಣಿಸದು. ಅದಕ್ಕೆಂದೇ ಅವರು ಅದನ್ನು ನಿರಾಕರಿಸಿಬಿಡುತ್ತಾರೆ.

ಕಾಮಾತ್ಮಾನಃ ಸ್ವರ್ಗಪರಾ
ಜನ್ಮಕರ್ಮಫಲಪ್ರದಾಮ್ ।
ಕ್ರಿಯಾವಿಶೇಷಬಹುಲಾಂ
ಭೋಗೈಶ್ವರ್ಯಗತಿಂ ಪ್ರತಿ ॥ 43

ಅವರು ಬಯಕೆಯ ಬೆನ್ನು ಹತ್ತಿದವರು. ಸ್ವರ್ಗವೇ ಪುರುಷಾರ್ಥ ಎಂದು ಭ್ರಮಿಸಿದವರು. ನಮ್ಮನ್ನು ಹುಟ್ಟು ಸಾವುಗಳ ಸುಳಿಯಲ್ಲಿ ಸಿಕ್ಕಿಸುವ ಕರ್ಮ ಕುಂಡದ ಕ್ಷಣಿಕ ಭೋಗ್ಯಭಾಗ್ಯಗಳಿಗೆ ಮರುಳಾದವರು.

ಭೋಗೈಶ್ವರ್ಯ ಪ್ರಸಕ್ತಾನಾಂ
ತಯಾಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ
ಸಮಾಧೌ ನ ವಿಧೀಯತೇ ॥ 44

ಇಂದ್ರಿಯ ಭೋಗ ಮತ್ತು ಸಂಪತ್ತುಗಳಲ್ಲಿ ಆಸಕ್ತರಾದ ಇಂಥವರು ಫಲಸ್ತುತಿಗಳ ಮಾತಿನ ಸೆಳೆತಕ್ಕೆ ಮರುಳಾಗುತ್ತಾರೆ. ಅಂಥವರ ಮನಸ್ಸಿನಲ್ಲಿ ನೆಲೆನಿಂತ ತತ್ತ್ವದ ತಿಳುವಳಿಕೆಯುಂಟಾಗುವುದಿಲ್ಲ.

ತ್ರೈಗುಣ್ಯವಿಷಯಾ ವೇದಾಃ
ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ
ನಿರ್ಯೋಗಕ್ಷೇಮ ಆತ್ಮವಾನ್ ॥ 45

ಮೇಲುನೋಟಕ್ಕೆ ಕಾಣುವ ಕರ್ಮಕಾಂಡದ ಮಾತುಗಳೆಲ್ಲ ಸತ್ತ್ವರಜಸ್ತಮೋಗುಣ ಮಯವಾದ ಸಂಸಾರಕ್ಕೆ ಸಂಬಂಧಪಟ್ಟವುಗಳು. ಅರ್ಜುನ, ನೀನು ಆ ಗುಣಗಳನ್ನು ದಾಟಿ ನಿಲ್ಲಬೇಕು. ಅದರಾಚೆಗಿರುವ ಭಗವತ್ತತ್ತ್ವವನ್ನು ಕಾಣಬೇಕು. ಸಂಸಾರದ ದ್ವಂದ್ವಗಳನ್ನು ಬಿಡಬೇಕು. ಶುದ್ಧ ಸತ್ತ್ವದಲ್ಲಿ ಮನಸ್ಸನ್ನು ನೆಲೆಗೊಳಿಸಿ ಯೋಗಕ್ಷೇಮಗಳ ಚಿಂತೆ ಬಿಟ್ಟು ಭಗವಂತನಲ್ಲಿ ಭಾರಹಾಕಿ ಬಾಳಬೇಕು.



ಯಾವಾನರ್ಥ ಉದಪಾನೇ
ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು
ಬ್ರಾಹ್ಮಣಸ್ಯ ವಿಜಾನತಃ ॥ 46

ಬಾವಿಯಿಂದ ಆಗುವ ಪ್ರಯೋಜನ ಎಲ್ಲೆಡೆಯೂ ತುಂಬಿ ಹರಿಯುವ ಸಮುದ್ರದಿಂದ ಆಗಿಯೇ ಆಗುತ್ತದೆ. ಹೀಗೆಯೇ ವೇದದಲ್ಲಿ ಹೇಳಿರುವ ಎಲ್ಲ ಫಲಗಳೂ ಬ್ರಹ್ಮಜ್ಞಾನಿಗೆ ಸಿಕ್ಕೇ ಸಿಗುವವು.

ಕರ್ಮಣ್ಯೇ ವಾಧಿಕಾರಸ್ತೇ
ಮಾ ಫಲೇಷು ಕದಾಚನ ।
ಮಾ ಕರ್ಮಫಲಹೇತುರ್ಭೂಃ
ಮಾ ತೇ ಸಂಗೋಽಸ್ತ್ವಕರ್ಮಣಿ ॥ 47

ಕರ್ಮ ಮಾಡುವುದಷ್ಟೆ ನಿನ್ನ ಹಕ್ಕು. ಕರ್ಮಫಲದ ಮೇಲೆ ಹಕ್ಕು ಸಾಧಿಸಬೇಡ. ಫಲದ ಆಸೆಯಿಂದ ಕರ್ಮ ಮಾಡಲೂ ಬೇಡ. ಹಾಗೆಯೇ ಕರ್ಮ ತ್ಯಾಗದ ಕಡೆಗೂ ನಿನ್ನ ಒಲವು ಹರಿಯದಿರಲಿ.

ಯೋಗಸ್ಥಃ ಕುರು ಕರ್ಮಾಣಿ
ಸಂಗಂ ತ್ಯಕ್ತ್ವಾ ಧನಂಜಯ ।
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ
ಸಮತ್ವಂ ಯೋಗ ಉಚ್ಯತೇ ॥ 48

ಅರ್ಜುನ, ಯೋಗನಿಷ್ಠನಾಗಿ ಫಲಕ್ಕಾಗಿ ಆಸೆ ಮಾಡದೆ, ಫಲ ದೊರೆತರೆ ಹಿಗ್ಗದೆ ಸಿಗದಿದ್ದರೆ ಕುಗ್ಗದೆ ಒಂದೇ ಭಾವದಿಂದ ಕರ್ಮಗಳನ್ನು ಮಾಡು. ಈ ಸಮದೃಷ್ಟಿಯೆ ನಿಜವಾದ ಯೋಗ.

ದೂರೇಣ ಹ್ಯವರಂ ಕರ್ಮ
ಬುದ್ಧಿಯೋಗಾದ್ಧನಂಜಯ ।
ಬುದ್ಧೌ ಶರಣಮನ್ವಿಚ್ಛ
ಕೃಪಣಾಃ ಫಲಹೇತವಃ ॥ 49

ಅರ್ಜುನ, ಇಂಥ ಜ್ಞಾನಮಾರ್ಗಕ್ಕಿಂತ ಫಲವನ್ನು ಬಯಸಿ ಮಾಡುವ ಕರ್ಮವು ಬಹು ಕೀಳು. ಅದರಿಂದ ಜ್ಞಾನಯೋಗವನ್ನು ಆಶ್ರಯಿಸು. ಫಲಕ್ಕಾಗಿ ಕರ್ಮ ಮಾಡುವವರು ಶೋಚನೀಯರು.

ಬುದ್ಧಿಯುಕ್ತೋ ಜಹಾತೀಹ
ಉಭೇ ಸುಕೃತ ದುಷ್ಕೃತೇ ।
ತಸ್ಮಾದ್ಯೋಗಾಯ ಯುಜ್ಯಸ್ವ
ಯೋಗಃ ಕರ್ಮಸು ಕೌಶಲಮ್ ॥ 50

ಆತ್ಮಜ್ಞಾನವನ್ನು ಪಡೆದವನು ಬದುಕಿರುವಾಗಲೇ ಅಪ್ರಿಯವಾದ ಪಾಪಪುಣ್ಯಗಳನ್ನು ದೂರ ಮಾಡಿಕೊಳ್ಳುತ್ತಾನೆ. ಆದ್ದರಿಂದ ಜ್ಞಾನಮಾರ್ಗದಲ್ಲಿ ನಿರತನಾಗು. ಫಲವನ್ನು ಬಯಸದೆ ಭಗವದರ್ಪಣ ಬುದ್ಧಿಯಿಂದ ಕರ್ಮ ಮಾಡುವುದೇ ನಿಜವಾದ ಜ್ಞಾನಮಾರ್ಗ.

## ಸ್ಥಿತ ಪ್ರಜ್ಞನ ಲಕ್ಷಣವೇನು ?

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಕರ್ಮಜಂ ಬುದ್ಧಿಯುಕ್ತಾ ಹಿ
ಫಲಂ ತ್ಯಕ್ತ್ವಾ ಮನೀಷಿಣಃ ।
ಜನ್ಮಬಂಧವಿನಿರ್ಮುಕ್ತಾಃ
ಪದಂಗಚ್ಛಂತ್ಯನಾಮಯಮ್ ॥ 51

ಜ್ಞಾನಿಗಳು ಕರ್ಮದ ಫಲವನ್ನು ಬಯಸದೆ ಜ್ಞಾನಮಾರ್ಗದಲ್ಲೇ ನಿರತರಾಗಿ ಬಾಳ ಬಂಧವನ್ನು ಕಳಚಿಕೊಂಡು ದೋಷದೂರವಾದ ಪರಮ ಪದವಿಯನ್ನು ಪಡೆಯುತ್ತಾರೆ.

ಯದಾ ತೇ ಮೋಹಕಲಿಲಂ
ಬುದ್ಧಿರ್ವ್ಯತಿತರಿಷ್ಯತಿ ।
ತದಾ ಗಂತಾಸಿ ನಿರ್ವೇದಂ
ಶ್ರೋತವ್ಯಸ್ಯ ಶ್ರುತಸ್ಯ ಚ ॥ 52

ನಿನ್ನ ಮನಸ್ಸು ತಪ್ಪು ತಿಳಿವೆಂಬ ಹೊಲಸನ್ನು ಕಳೆದುಕೊಂಡಾಗ ನೀನು ಕೇಳಿದ, ಕೇಳಲಿರುವ ಎಲ್ಲ ಉಪದೇಶ ಸಾರ್ಥಕವಾಗುತ್ತದೆ.

ಶ್ರುತಿವಿಪ್ರತಿಪನ್ನಾ ತೇ
ಯದಾ ಸ್ಥಾಸ್ಯತಿ ನಿಶ್ಚಲಾ ।
ಸಮಾಧಾವಚಲಾ ಬುದ್ಧಿಃ
ತದಾ ಯೋಗಮವಾಪ್ಸ್ಯಸಿ ॥ 53

ವೇದವಿರುದ್ಧವಾಗಿ ಹೊಯ್ದಾಡುತ್ತಿದ್ದ ನಿನ್ನ ಬುದ್ಧಿಯು ತತ್ತ್ವನಿಶ್ಚಯದಿಂದ ಸ್ಥಿರಗೊಂಡು ಭಗವತ್‌ಸಮಾಧಿಯಲ್ಲಿ ವಿಚಲವಾಗದೆ ನೆಲೆ ನಿಂತಾಗ ನಿನಗೆ ಯೋಗ ಸಿದ್ಧಿಸಿತು ಎಂದರ್ಥ.

ಅರ್ಜುನ ಉವಾಚ–

ಸ್ಥಿತಪ್ರಜ್ಞಸ್ಯ ಕಾ ಭಾಷಾ
ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ
ಕಿಮಾಸೀತ ವ್ರಜೇತ ಕಿಮ್ ॥ 54

ಅರ್ಜುನ : ಕೃಷ್ಣ, ಭಗವತ್‌ಸಮಾಧಿಯನ್ನು ಸಾಧಿಸಿದ ಸ್ಥಿತಪ್ರಜ್ಞನ ಲಕ್ಷಣವೇನು? ಅವನು ಹೇಗೆ ಮಾತನಾಡುತ್ತಾನೆ? ಹೇಗಿರುತ್ತಾನೆ? ಹೇಗೆ ನಡೆದಾಡುತ್ತಾನೆ?

ಶ್ರೀ ಭಗವಾನುವಾಚ–

ಪ್ರಜಹಾತಿ ಯದಾ ಕಾಮಾನ್
ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟಃ
ಸ್ಥಿತಪ್ರಜ್ಞಸ್ತದೋಚ್ಯತೇ ॥ 55

ಶ್ರೀಕೃಷ್ಣ : ಅರ್ಜುನ, ಮನಸ್ಸಿನಲ್ಲಿರುವ ಬಯಕೆಗಳನ್ನೆಲ್ಲ ತೊರೆದು ಭಗವದನುಗ್ರಹದಿಂದ ಭಗವಂತನಲ್ಲಿ ನೆಲೆಕಂಡು ತೃಪ್ತನಾದಾಗ ಸ್ಥಿತಪ್ರಜ್ಞ ಎನ್ನಿಸಿಕೊಳ್ಳುತ್ತಾನೆ.

ದುಃಖೇಷ್ವನುದ್ವಿಗ್ನಮನಾಃ
ಸುಖೇಷು ವಿಗತಸ್ಪೃಹಃ ।
ವೀತರಾಗ ಭಯ ಕ್ರೋಧಃ
ಸ್ಥಿತಧೀರ್ಮುನಿರುಚ್ಯತೇ ॥ 56

ದುಃಖಗಳು ಬಂದಾಗ ತಳಮಳಗೊಳ್ಳದೆ, ಸುಖಗಳು ಬಂದಾಗ ಬಾಯನೀರು ಸುರಿಸದೆ, ಒಲವು, ಹೆದರಿಕೆ, ಸಿಟ್ಟು ಇಂಥ ಭಾವಗಳಿಗೆ ಬಲಿಯಾಗದೆ ವಿಚಾರವನ್ನೇ ಹಚ್ಚಿಕೊಂಡಿರುವವನು ಸ್ಥಿತಪ್ರಜ್ಞ ಎನ್ನಿಸಿಕೊಳ್ಳುತ್ತಾನೆ.

ಯಃ ಸರ್ವತ್ರಾನಭಿಸ್ನೇಹಃ
ತತ್ತತ್ಪ್ರಾಪ್ಯ ಶುಭಾಶುಭಮ್ ।
ನಾಭಿನಂದತಿ ನ ದ್ವೇಷ್ಟಿ
ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ 57

ಯಾವುದನ್ನು ಅತಿಯಾಗಿ ಹಚ್ಚಿಕೊಳ್ಳದೆ, ಒಳ್ಳೆಯದೋ ಕೆಟ್ಟದ್ದೋ ಒದಗಿ ಬಂದಾಗ ಹಿಗ್ಗದೆ ಕುಗ್ಗದೆ ಸಮವಾಗಿ ಕಾಣಬಲ್ಲವನ ಪ್ರಜ್ಞೆ ಸ್ಥಿರವಾಗಿರುತ್ತದೆ.

ಯದಾ ಸಂಹರತೇ ಚಾಯಂ
ಕೂರ್ಮೋಽಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಃ
ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ 58

ಆಮೆಯು ತನ್ನ ಅವಯವಗಳನ್ನು ಎಲ್ಲ ಕಡೆಯಿಂದಲೂ ಒಳಸೆಳೆದುಕೊಳ್ಳುವಂತೆ ಹೊರಗಣ ವಿಷಯಗಳಿಂದ ಇಂದ್ರಿಯಗಳನ್ನು ಅಂತರ್ಮುಖಗೊಳಿಸಬಲ್ಲವನ ಪ್ರಜ್ಞೆ ಸ್ಥಿರವಾಗಿರುತ್ತದೆ.

ವಿಷಯಾ ವಿನಿವರ್ತಂತೇ
ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ
ಪರಂ ದೃಷ್ಟ್ವಾ ನಿವರ್ತತೇ ॥ 59

ಆಹಾರ ನಿಗ್ರಹದಿಂದ ಜೀವನಿಗೆ ವಿಷಯ ಭೋಗದ ಶಕ್ತಿ ಕುಂದುವುದೇ ಹೊರತು ಭೋಗದ ಬಯಕೆ ಕುಂದುವುದಿಲ್ಲ. ಭಗವಂತನ ದರ್ಶನವಾದಾಗಲೇ ಈ ಬಯಕೆಯನ್ನೂ ನಿಗ್ರಹಿಸುವುದು ಸಾಧ್ಯ.

ಯತತೋ ಹ್ಯಪಿ ಕೌಂತೇಯ
ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ
ಹರಂತಿ ಪ್ರಸಭಂ ಮನಃ ॥ 60

ಹತ್ತು ಕಡೆಗೂ ಎಳೆಯುವಂಥ ಇಂದ್ರಿಯಗಳು ಪ್ರಯತ್ನಶೀಲನಾದ ಜ್ಞಾನಿಯ ಮನಸ್ಸನ್ನೂ ಬಲಾತ್ಕಾರವಾಗಿ ಅಪಹರಿಸಿಬಿಡುವವು.

ತಾನಿ ಸರ್ವಾಣಿ ಸಂಯಮ್ಯ
ಯುಕ್ತ ಆಸೀತ ಮತ್ಪರಃ ।

(36 ನೇ ಪುಟ ನೋಡಿ)

# ರಾಮಾಯಣದ ರಾಜನೀತಿ

ವಾಲ್ಮೀಕಿ ರಾಮಾಯಣವು ಆದಿಕಾವ್ಯವಾಗಿರುವಂತೆಯೇ ಆದರ್ಶಕಾವ್ಯ. ವಾಲ್ಮೀಕಿಮಹರ್ಷಿಗಳು ಈ ಕಾವ್ಯವನ್ನು ಲೋಕಕಲ್ಯಾಣಕ್ಕಾಗಿ ರಚಿಸಿದರು. ಇದರಲ್ಲಿ ಮಿತ್ರ ಸಮ್ಮಿತ ಮತ್ತು ಕಾಂತಾಸಮ್ಮಿತಗಳ ಮೂಲಕ ಆದರ್ಶಜೀವನಕ್ಕೆ ಮೂಲಸೂತ್ರಗಳನ್ನು ಉಪದೇಶಿಸಿದ್ದಾರೆ ಉಪದೇಶವೆಂದಮಾತ್ರಕ್ಕೆ ಅದು ಕೇವಲ ಆಚಾರಸಂಹಿತೆಯಲ್ಲ. ಆದರ್ಶ ವ್ಯಕ್ತಿಗಳ ಅನುಷ್ಠಾನದ ಮೂಲಕ ತ್ರಿಕಾಲಾಬಾಧಿತವಾದ ಅನುಷ್ಠೇಯ ವಿಷಯಗಳ ಕೈಪಿಡಿ. ಋಷಿವರ್ಯರಿಗೆ 'ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ ನ್ಯಾಯೇನ ಮಾರ್ಗೇಣ ಮಹೀಂ ಮಹೀಶಾಃ। ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ ಲೋಕಾಸ್ಸಮಸ್ತಾಃ ಸುಖಿನೋಭವಂತು' ಎಂಬುದು ಪರಮಧ್ಯೇಯ. ಈ ಸರ್ವ ಸುಖಶಾಂತಿಗಳನ್ನು ಸಾಧಿಸುವವರು ರಾಜ ಮತ್ತು ಆತನ ಆಡಳಿತ ಕೃವು. ಅವು ಎಷ್ಟು ಸುವ್ಯವಸ್ಥವಾಗಿದ್ದರೆ ರಾಷ್ಟ್ರವೂ ಪ್ರಜೆಗಳೂ ಅಷ್ಟು ಸುಖವಾಗಿರುತ್ತಾರೆ. ಕವಿಯ ದೃಷ್ಟಿಯಲ್ಲಿ ರಾಜನು ರಾಷ್ಟ್ರಕ್ಕೆ ಕಣ್ಣಿದ್ದಂತೆ. ಎಲ್ಲ ಧರ್ಮಾರ್ಥಕಾಮಗಳ ವ್ಯವಸ್ಥೆಗೂ ಅವನೇ ಕಾರಣ. ಅವನೇ ರಾಷ್ಟ್ರದ ಹಿತಾಹಿತಗಳನ್ನು ಸಂಪೂರ್ಣವಾಗಿ ನಿಷ್ಕರ್ಷಿಸುವವನು. ಆದುದರಿಂದ ಅವನ ಪರಿಕರಗಳೂ ಬಹು ವ್ಯವಸ್ಥಿತ ಮಾರ್ಗದಲ್ಲಿ ನಿಷ್ಕೃಷ್ಟವಾಗಿರಬೇಕು. ಈ ಅಂಶವನ್ನು ಮನಸಿನಲ್ಲಿಟ್ಟುಕೊಂಡು ವಾಲ್ಮೀಕಿ ಋಷಿಗಳು ರಾಜನೀತಿಯ ವಿವಿಧ ಮುಖಗಳನ್ನು ತಮ್ಮ ಕಾವ್ಯದುದ್ದಕ್ಕೂ ಅಲ್ಲಲ್ಲಿ ಸ್ಪಷ್ಟವಾಗಿ ವಿವರಿಸಿರುವುದಲ್ಲದೆ ಅಯೋಧ್ಯಕಾಂಡದ ನೂರನೆಯ ಸರ್ಗದಲ್ಲಿ ಚಿತ್ರಕೂಟದಲ್ಲಿ ರಾಮನು ಭರತನನ್ನು ಪ್ರಶ್ನಿಸುವ ರೂಪದಲ್ಲಿ ಅದರ ಸಾರಸಂಗ್ರಹವನ್ನು ಕ್ರೋಢೀಕರಿಸಿದ್ದಾರೆ. ಅದರ ಆಧಾರದ ಮೇಲೆ ರಾಮಾಯಣದಲ್ಲಿ ಪ್ರತಿಪಾದಿತವಾದ ರಾಜನೀತಿಯನ್ನು ಈ ರೀತಿ ಸಂಗ್ರಹಿಸಬಹುದು.

ರಾಮಾಯಣದ ಕಾಲದ ಪ್ರಭುತ್ವ ಸಾಂಕುಶ ಪ್ರಭುತ್ವ. ಧರ್ಮಿಷ್ಠರೂ ಮೇಧಾವಿಗಳೂ ಆದ ಸಚಿವರ ಸಹಕಾರದಿಂದ ರಾಜ್ಯದ ರಾಷ್ಟ್ರಾಡಳಿತವು ನಡೆಯತಕ್ಕದ್ದು. ಈ ಎರಡು ಅಂಗಗಳೂ ಬಹು ನಿಷ್ಕೃಷ್ಟರೀತಿಯಲ್ಲಿ ನೀತಿಗಳನ್ನು ಅನುಸರಿಸತಕ್ಕದ್ದು.

ಸನ್ಮಾರ್ಗದಲ್ಲಿರುವ ರಾಜನು ಮಾತಾಪಿತೃಗಳನ್ನು ಆದರದಿಂದ ಕಂಡು ಅವರು ಸಂತೋಷದಿಂದಿರುವಂತೆ ನೋಡಿಕೊಳ್ಳಬೇಕು. ವಿದ್ವಾಂಸರೂ ಧರ್ಮನಿಷ್ಠರೂ ಸದಾವರ್ಚಸ್ವಿಗಳೂ ಆದ ಕುಲಪುರೋಹಿತರನ್ನು ಆದರದಿಂದ ಗೌರವಿಸಬೇಕು. ಅಂತಃಪುರ ಸ್ತ್ರೀಯರನ್ನು ಸನ್ಮಾನಿಸಿ ಅವರು ಸಂತೋಷದಿಂದಿರುವಂತೆ ಮಾಡಬೇಕು. ಅಗ್ನಿಕಾರ್ಯದಲ್ಲಿ ಸಾವಧಾನಚಿತ್ತನೂ ಬುದ್ಧಿಶಾಲಿಯೂ ಋಜುಮಾರ್ಗದವನೂ ಆದ ಪುರೋಹಿತನಿಂದ ಆಗಾಗ ಅಗ್ನಿಕಾರ್ಯದ ವಿಷಯವಾದ ತಿಳುವಳಿಕೆಯನ್ನು ಪಡೆಯಬೇಕು. ದೇವತೆಗಳೂ, ತಂದೆತಾಯಿಗಳೂ, ವಿದ್ವಾಂಸರುಗಳೂ, ವಿದ್ಯಾಗುರುಗಳೂ ಪಿತೃಸಮಾನರಾದ ಬಂಧುಗಳೂ ವೃದ್ಧರೂ ವೈದ್ಯರು ಮತ್ತು ಬ್ರಾಹ್ಮಣರು ಮೊದಲಾದವರನ್ನು ಆದರದಿಂದ ಕಾಣುತ್ತಿರಬೇಕು. ಸೇವಕರನ್ನು ಯೋಗ್ಯದಲ್ಲಿ ನಡೆಸಿಕೊಳ್ಳಬೇಕು. ಶಸ್ತ್ರಾಸ್ತ್ರ ಪಾರಂಗತರನ್ನು ಧನುರ್ವಿದ್ಯಾಗುರುಗಳನ್ನು ಮನ್ನಿಸುತ್ತಿರಬೇಕು. ಸಮಾನ ವಯಸ್ಕರೂ, ಶೂರರೂ ವಿದ್ಯಾವಂತರೂ ಜಿತೇಂದ್ರಿಯರೂ ಉತ್ತಮ ವಂಶದಲ್ಲಿ ಹುಟ್ಟಿದವರೂ ಇನ್ನೊಬ್ಬರ ಮನೋಗತವನ್ನು ತಿಳಿಯಲು ಸಮರ್ಥರಾದವರನ್ನು ಮಂತ್ರಿಗಳಾಗಿ ನೇಮಿಸಿಕೊಳ್ಳಬೇಕು. ರಾಜರ ಜಯಕ್ಕೆ ಮಂತ್ರಾಲೋಚನ ಸಭೆಯೇ ಮೂಲಕಾರಣ. ರಾಜಶಾಸ್ತ್ರ ನಿಪುಣರಾದ ಅಮಾತ್ಯರು ಈ ಮಂತ್ರಾಲೋಚನೆಯನ್ನು ಗೋಪ್ಯವಾಗಿಟ್ಟುಕೊಂಡಿರಬೇಕು. ನಿದ್ರಾವಶನಾಗಿರದೆ ಯುಕ್ತಕಾಲದಲ್ಲಿ ಎಚ್ಚರಿಕೆಯಿಂದಿರಬೇಕು. ರಾತ್ರಿಯ ಕಡೆಯಜಾವದಲ್ಲಿದ್ದೂ ರಾಜನೀತಿಯ ಕರ್ತವ್ಯವನ್ನು ಪರ್ಯಾಲೋಚಿಸಬೇಕು, ಒಬ್ಬನೇ ಯೋಚನೆಮಾಡಿ ನಿರ್ಣಯ ಮಾಡಬಾರದು. ಅಲ್ಪಪ್ರಯತ್ನದಿಂದ ಬಹು ಫಲವನ್ನು ಕೊಡುವ ಕಾರ್ಯವನ್ನು ಕೂಡಲೇ ಆಚರಣೆಗೆ ತರಬೇಕು. ಅದನ್ನು ಆಚರಣೆಗೆ ತರಲು ವಿಳಂಬ ಮಾಡಬಾರದು.

ಆಚರಣೆಗೆ ತರಬೇಕೆಂದಿರುವ ಮಂತ್ರಾಲೋಚನೆಯು ಮೊದಲೇ ಸಾಮಂತರಿಗೆ ತಿಳಿದಿರಬಾರದು. ಅದು ಸಾಮಂತರಿಗೆ ತಿಳಿಯುವಷ್ಟರಲ್ಲಿ ಪೂರ್ಣವಾಗಿ ಆಚರಣೆಗೆ ಬಂದಿರಬೇಕು. ರಾಜನ ಅಥವಾ ಮಂತ್ರಿಗಳ ಆಲೋಚನೆಯು ಊಹೆಯಿಂದಾಗಲಿ ಯುಕ್ತಿಯಿಂದಾಗಲಿ ಜನರಿಗೆ ತಿಳಿದು ಬಹಿರಂಗವಾಗದಂತೆ ನೋಡಿಕೊಳ್ಳಬೇಕು. ಸಾವಿರ ಮೂರ್ಖರಿಗಿಂತ ಒಬ್ಬ ಪಂಡಿತನು ಲೇಸೆಂದು ಅವನನ್ನು ಆದರಿಸಬೇಕು. ಏಕೆಂದರೆ ಕಷ್ಟಕಾಲದಲ್ಲಿ ಪಂಡಿತನೊಬ್ಬನೇ ಸರಿಯಾದ ಉಪಾಯವನ್ನು ಬೋಧಿಸಿ ಕಾರ್ಯವನ್ನು ನಿರ್ವಹಿಸಬಲ್ಲ. ಮೂರ್ಖರಸಂಖ್ಯೆ ಸಾವಿರವಿದ್ದರೂ ಅವರಿಂದ ರಾಜನಿಗೆ ಯಾವಸಹಾಯವೂ ಇಲ್ಲ. ಮೇಧಾವಿಯೂ ಶೂರನೂ ದಕ್ಷನೂ ರಾಜ್ಯಶಾಸ್ತ್ರವಿದನೂ ಆದ ಸಚಿವನು ಒಬ್ಬನೇ ಆದರೂ ರಾಜನಿಗಾಗಲಿ ರಾಜ್ಯವನ್ನಾಳವತಕ್ಕವರಿಗಾಗಲಿ ಮಹತ್ತರವಾದ ಶ್ರೇಯಸ್ಸನ್ನುಂಟುಮಾಡುವನು. ಉತ್ತಮವಾದ ಅಧಿಕಾರಿಗಳನ್ನು ಮೇಲ್ಪಟ್ಟದಲ್ಲೂ ಮಧ್ಯಮದವರನ್ನು ಸಾಮಾನ್ಯ ಕಾರ್ಯದಲ್ಲಿಯೂ ನಿಕೃಷ್ಟರಾದವರನ್ನು ಕೀಳ್ಪಟ್ಟದ ಕೆಲಸಗಳಲ್ಲಿಯೂ ನೇಮಿಸಬೇಕು. ಅತ್ಯುಚ್ಚವಾದ ಅಧಿಕಾರದಲ್ಲಿ ಸಚಿವರನ್ನು ಪರೀಕ್ಷಿಸಿ ನೇಮಿಸಬೇಕು. ಅವರು ಲಂಚವನ್ನು ತೆಗೆದುಕೊಳ್ಳದವರೂ ಪ್ರಾಮಾಣ್ಯದ ವಿಷಯದಲ್ಲಿ ಸಂದೇಹಾತೀತರೂ ಆಗಿರಬೇಕು. ಅವರು ಪಿತೃಪಿತಾಮಹ ಪರಂಪರೆಯಿಂದ ಬಂದವರೂ ಮನಶ್ಶುದ್ಧಿಯುಳ್ಳವರೂ ಆಗಿರಬೇಕು. ರಾಜನು ಒಂದುವೇಳೆ ಪ್ರಜೆಗಳಿಗೆ ಉಗ್ರದಂಡನೆ ವಿಧಿಸಿ ರಾಷ್ಟ್ರವನ್ನು ವಿಧ್ವಂಸಗೊಳಿಸತೊಡಗಿದರೆ ಮಂತ್ರಿಗಳು ಅದನ್ನು ಒಪ್ಪದೆ ರಾಜನನ್ನು ತಡೆದುನಿಲ್ಲಿಸಲು ಮುಂದೆ ಬರುವವರಾಗಬೇಕು. ದುರ್ಮಾರ್ಗದಿಂದ ಹಣವನ್ನು ಸಂಪಾದಿಸುವ ಪತಿತನನ್ನು ಋತ್ವಿಜರೂ, ಬಲಾತ್ಕರಿಸುವ ಕಾಮಾತುರರನ್ನು ಸ್ತ್ರೀಯರೂ ತಿರಸ್ಕರಿಸುತ್ತಾರೆ. ಹಾಗೆ ಪ್ರಜೆಗಳು ರಾಜನನ್ನು ಎಂದಿಗೂ ತಿರಸ್ಕರಿಸಬಾರದು. ಉಪಾಯದಿಂದ ಹಣವನ್ನು ಕೇಳುವ ವೈದ್ಯನನ್ನೂ ಒಡೆಯನನ್ನು ದೂಷಿಸುವ ಸೇವಕನನ್ನೂ ತನ್ನ ಐಶ್ವರ್ಯದ ಮೇಲೆ ಕಣ್ಣಿಟ್ಟಿರುವ ಶೂರನನ್ನೂ ರಾಜನು ವರ್ಜಿಸಬೇಕು. ಇಲ್ಲವೇ ಕೊಂದುಹಾಕಬೇಕು. ಇಲ್ಲದಿದ್ದರೆ ತಾನೇ ವಿಪತ್ತಿನಲ್ಲಿ ಸಿಕ್ಕಿಕೊಳ್ಳುತ್ತಾನೆ. ರಾಜನು ಸತ್ಕಾರ್ಯದಿಂದ ಸಂತುಷ್ಟನೂ ಶೂರನೂ ಸೇನೆಯನ್ನು ವ್ಯವಸ್ಥೆಗೊಳಿಸುವುದರಲ್ಲಿ ಸಮರ್ಥನೂ ಆದವನನ್ನು ಸೇನಾಪತಿಯಾಗಿ ನೇಮಿಸಿಕೊಳ್ಳಬೇಕು. ಅವನು ಧೀರನಾಗಿ ಲಂಚರುಶವತ್ತುಗಳಿಗೆ ಆಸೆಪಡದ ಮನಶ್ಶುದ್ಧಿಯುಳ್ಳವನಾಗಿರಬೇಕು. ಉತ್ತಮ ಕುಲದಲ್ಲಿ ಜನಿಸಿ ರಾಜಭಕ್ತಿಯುಳ್ಳವನಾಗಿರಬೇಕು. ಬಲಶಾಲಿಗಳೂ ಯುದ್ಧವಿಶಾರದರೂ ಹಿಂದೆ ಅನೇಕ ಯುದ್ಧಗಳನ್ನು ಮಾಡಿ ಪ್ರಸಿದ್ಧರಾದವರೂ

**ಡಾ || ಎನ್. ಅನಂತರಂಗಾಚಾರ್**

ವೀರರೂ ಆದ ಸೇನಾಪತಿಗಳಿಗೆ ಬಹುಮಾನವನ್ನು ಕೊಟ್ಟು ಸನ್ಮಾನಿಸುತ್ತಿರಬೇಕು. ಸೈನಿಕರಿಗೆ ಕೊಡಬೇಕಾದ ಆಹಾರಸಾಮಗ್ರಿಗಳನ್ನು ವೇತನವನ್ನು ಕಾಲಕಾಲಕ್ಕೆ ಯಥೋಚಿತವಾಗಿ ಸಲ್ಲಿಸುತ್ತಿರಬೇಕು. ಭೃತ್ಯರಿಗೆ ಕೊಡಬೇಕಾದ ಸಾಮಗ್ರಿಯನ್ನು ವೇತನವನ್ನು ಸರಿಯಾದ ಕಾಲದಲ್ಲಿ ತೊಂದರೆಯಿಲ್ಲದೆ ಪಾವತಿಮಾಡುತ್ತಿರಬೇಕು. ಹಾಗೆ ಮಾಡದಿದ್ದರೆ ಭೃತ್ಯರು ಸ್ವಾಮಿಯಮೇಲೆ ಕೋಪಿಸಿಕೊಳ್ಳುತ್ತಾರೆ. ದುರ್ಮಾರ್ಗಕ್ಕೆ ಇಳಿಯುತ್ತಾರೆ. ಇದು ಬಹಳ ಅನರ್ಥಕ್ಕೆ ಕಾರಣ. ಜ್ಞಾತಿಗಳನ್ನೆಲ್ಲ ಸ್ನೇಹದಿಂದ ಕಾಣಬೇಕು. ಸಮಯ ಬಂದಾಗ ಅವರೆಲ್ಲರೂ ರಾಜನಿಗೆ ಪ್ರಾಣವನ್ನು ತೆರಲು ಸಿದ್ಧರಾಗಿರಬೇಕು. ನಮ್ಮ ದೇಶದಲ್ಲಿಯೇ ಹುಟ್ಟಿಬೆಳೆದ ವಿದ್ವಾಂಸರನ್ನು ದೂತರಾಗಿ ನೇಮಿಸಿಕೊಳ್ಳಬೇಕು. ದೂತನು ಕಾರ್ಯ ಸಮರ್ಥನೂ ಪ್ರತಿಭಾಶಾಲಿಯೂ ಆಗಿರಬೇಕು. ಹೇಳಿಕಳುಹಿಸಿದ ಸಂದೇಶವನ್ನು ಮಾತ್ರ ತಿಳಿಸುವ ಸತ್ಯಸಂಧನಾಗಿರಬೇಕು. ಅವನು ಇದರ ಯೋಗ್ಯತೆ ಇಷ್ಟೇ ಎಂದು ನಿರ್ಣಯಿಸಬಲ್ಲ ಬುದ್ಧಿಶಾಲಿಯಾಗಿರಬೇಕು. ಶತ್ರುಪಕ್ಷದಲ್ಲಿ ಮಂತ್ರಿಗಳೇ ಮೊದಲಾದ ಹದಿನೆಂಟು ತೀರ್ಥಗಳು ಹೇಗೆ ನಡೆದುಕೊಳ್ಳುತ್ತಿವೆಯೆಂದು ಪರೀಕ್ಷಿಸಲು ಒಬ್ಬೊಬ್ಬರ ಮೇಲೆ ಮೂರು ಗೂಢಚಾರರಂತೆ ನಿಯಮಿಸಬೇಕು. ಆ ಗೂಢಚಾರರಿಗೂ ಅನ್ಯೋನ್ಯಪರಿಚಯವಿರಬಾರದು. ಹಾಗೆಯೇ ಸ್ವಪಕ್ಷದಲ್ಲಿ ಸೇನಾಪತಿಯೇ ಮೊದಲಾದ ೧೫ ತೀರ್ಥಗಳನ್ನು ಗೂಢಚಾರರಿಂದ ಪರೀಕ್ಷಿಸುತ್ತಿರಬೇಕು. ದೇಶದಿಂದ ಹೊರಗೆ ಓಡಿಸಿದಂತಹ ಶತ್ರುಗಳು ಕಾಲಾಂತರದಲ್ಲಿ ದೇಶದೊಳಗೆ ಬಂದು ಸೇರಿಕೊಂಡರೆ ಅವರು ಕೈಲಾಗದ ದುರ್ಬಲರೆಂದು ಅವರನ್ನು ಎಂದೂ ಉಪೇಕ್ಷಿಸಬಾರದು. ಬ್ರಾಹ್ಮಣರಲ್ಲಿಯೂ ಕೆಲವು ನಾಸ್ತಿಕರಿದ್ದಾರೆ. ಅಂಥವರನ್ನು ಹತ್ತಿರಕ್ಕೆ ಸೇರಿಸಬಾರದು. ಅವರು ಅವಿವೇಕಿಗಳು. ತಾವೇ ಪಂಡಿತರೆಂದು ಒಣಹೆಮ್ಮೆಯನ್ನು ತಳೆದಿರುತ್ತಾರೆ. ಅವರು ಅನರ್ಥವನ್ನು ತಂದುಬಿಡುವರು. ಧರ್ಮಗಳನ್ನು ಬೋಧಿಸುವ ಉತ್ತಮ ಶಾಸ್ತ್ರಗಳಿದ್ದರೂ ಅವರು ಆ ಶಾಸ್ತ್ರಗಳನ್ನು ಉಲ್ಲಂಘಿಸಿ ಕುತರ್ಕವನ್ನೇ ಅವಲಂಬಿಸುತ್ತಾರೆ. ಆ ನಾಸ್ತಿಕರು ದುರ್ಮಾರ್ಗಿಗಳು, ದುರ್ಬುದ್ಧಿಯ ಪಂಡಿತರು. ನಿರರ್ಥಕವಾದ ಮಾತನ್ನಾಡುತ್ತಾರೆ. ರಾಜ್ಯದ ನಗರಗಳು ಸಂಪತ್ಸಮೃದ್ಧವಾಗಿರಬೇಕು. ಪ್ರಜೆಗಳು ನೆಮ್ಮದಿಯಾಗಿರಬೇಕು. ದೇವಸ್ಥಾನಗಳಿಂದಲೂ ಅರವಟ್ಟಿಗೆಗಳಿಂದಲೂ ತುಂಬಿರಬೇಕು. ಸ್ತ್ರೀ ಪುರುಷರೆಲ್ಲರೂ ಉಲ್ಲಾಸದಿಂದಿರಬೇಕು. ಸಾಮಾಜಿಕಾದಿ ಉತ್ಸವಾದಿಗಳು ನಡೆಯುತ್ತಲೇ ಇರಬೇಕು. ಸಮಸ್ತ ಪ್ರಜೆಗಳಲ್ಲಿಯೂ ಕೃಷಿಯೂ ಸಮೃದ್ಧವಾಗಿರಬೇಕು. ಮಳೆಯನ್ನೇ ಆಶ್ರಯಿಸದೇ ನದೀಜಲದಿಂದ ಸಮಸ್ತ ಕೃಷಿಕಾರ್ಯವೂ ನಡೆಯುವಂತಿರಬೇಕು. ಕ್ರೂರಪ್ರಾಣಿಗಳ ಭಯವಾಗಲಿ

( 29ನೇ ಪುಟ ನೋಡಿ )

# ವಿಜಯದಾಸರ ಸುಳಾದಿಗಳು

(ಮುಂದುವರಿದುದು)

ಶ್ರೀವಿಜಯದಾಸರ ಈ ಸುಳಾದಿರಾಶಿ ನಮಗೆ ದೊರೆಯುವಂತೆ ಮಾಡಿದವರು ದಿವಂಗತ ಶ್ರೀ ಗೋರಬಾಳ ಹನುಮಂತರಾಯರು. ಹರಿದಾಸ ಸಾಹಿತ್ಯವನ್ನು ಈ ಶತಮಾನದಲ್ಲಿ ರಕ್ಷಿಸುವ ಕೆಲಸವನ್ನು ಮಾಡಿದ ಮಹನೀಯರಲ್ಲೊಬ್ಬರಾದ ಶ್ರೀಹನುಮಂತರಾಯರು ಶ್ರೀವಿಜಯದಾಸರ ಸುಳಾದಿಗಳನ್ನು ಏಳು ವಿಭಾಗಗಳಾಗಿ ಮಾಡಿ ಪ್ರತ್ಯೇಕ ಸಂಪುಟಗಳಲ್ಲಿ ಪ್ರಕಟಿಸಿದರು. ಉಡುಪಿಯ ಶ್ರೀಪಾವಂಜೆಗುರುರಾವ್ ಅವರು ಶ್ರೀವಿಜಯದಾಸರ ಸುಳಾದಿಗಳನ್ನು ಪ್ರಕಟಿಸಿದ್ದರೂ ಅವುಗಳ ಸಂಖ್ಯೆ ತುಂಬ ಕಡಿಮೆಯಾದುದರಿಂದಲೂ ಅಲ್ಲಿರುವ ಸುಳಾದಿಗಳು ಶ್ರೀ ಗೋರಬಾಳರ ಪ್ರಕಟನೆಯಲ್ಲಿರುವುದರಿಂದಲೂ ಅವುಗಳನ್ನು ಪ್ರತ್ಯೇಕವಾಗಿ ಪರಿಚಯ ಮಾಡಿಕೊಡುವ ಅಗತ್ಯವಿಲ್ಲ. ಪ್ರಾರ್ಥನೆ ಮತ್ತು ಸ್ತೋತ್ರ ಭಾಗ ಸುಳಾದಿಗಳ ವಿಷಯ ಒಂದೇ ಗುಂಪಿಗೆ ಸೇರುತ್ತವೆ. ಉಳಿದವು ವಿಷಯಕ್ಕೆ ತಕ್ಕಂತೆ ಪ್ರತ್ಯೇಕವಾಗಿ ಗಮನಿಸುವ ಅಂಶಗಳನ್ನೊಳಗೊಂಡಿವೆ.

ಪ್ರಾರ್ಥನಾಭಾಗದಲ್ಲಿ ವಿಜಯದಾಸರ ಒಂದು ನೂರು ಸುಳಾದಿಗಳಿವೆ. ಶೀರ್ಷಿಕೆಗೆ ತಕ್ಕಂತೆ ವಿಜಯ ವಿಠಲನಲ್ಲಿ ಭಕ್ತಿಯಿಂದ ಅವನ ಗುಣ ವಿಶೇಷಗಳನ್ನು ಹೊಗಳಿ ಉದ್ಧಾರ ಮಾಡಬೇಕೆಂಬ ಯಾಚನೆ ಹರಿದಾಸರ ಹೃದಯದ ಭಕ್ತ ತರಂಗಿಣಿ ಹರಿದಿದೆ. ಮಾನವಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಲು ಆರೋಗ್ಯ ಮತ್ತು ಆಯುಸ್ಸು ಮನಷ್ಯನಿಗಿರಬೇಕು. ಇವುಗಳಿಗೆ ಧಕ್ಕೆಯಾಗದಂತೆ ದೇಹದೃಢವಾಗಿರುವಂತೆ ಕೃಪೆದೋರಬೇಕೆಂದು ವಿಶೇಷವಾಗಿ ನರಸಿಂಹ ಮತ್ತು ದುರ್ಗಾರಮಣರ ಪ್ರಾರ್ಥನೆಯನ್ನು ಒಂಬತ್ತು ಸುಳಾದಿಗಳಲ್ಲಿ ಮಾಡಿದ್ದಾರೆ. ಭಕ್ತನ ದುಃಖನಿವೃತ್ತಿಯಾದರೆ ಪರಮಾತ್ಮನ ಖ್ಯಾತಿ ಹೆಚ್ಚುತ್ತದೆ ಎಂಬ ಅವರ ವಾದಸರಣಿ ಹೀಗಿದೆ.

ಆಳುಗೆದ್ದರೆ ನೋಡು ಅರಸಗೆ ಜಯಪ್ರದ
ಆಳು ನುಡಿದದ್ದು ಅರಸು ನುಡಿದದ್ದು
ಎಳಾಲ ಮಾಡದೆ ಯಾದವ ಕುಲಮಣಿ
ಪಾಲಿಸ ಬೇಕಯ್ಯಾ ಪರಮ ಅನಿಮಿತ್ತ

ಸಂಸಾರದ ಸಿಕ್ಕಿನೊಳಗೆ ಸಿಕ್ಕು ದಾರಿ ಕಾಣದಂತಾದ ಮನಸ್ಸನ್ನು ಎಚ್ಚರಿಸುತ್ತಾ 'ಕೊಡು ನಿನ್ನವರ ಸಂಗ, ದುರಿತರಾಶಿಯ ಬಿಡಿಸು, ದುಸ್ಸಂಗವನ್ನೆ ಕೆಡಿಸು, ಭವರೋಗ ಪರಿಹರಿಸು, ಕೈಯ್ಯಾ ಬಿಡದಿರು ಹರಿ ಕೈಟಭಾಸುರ ವೈರಿ, ಕರವಿಡಿದೆತ್ತುವುದು ಭವಕರ್ದಮದೊಳಗಿಂದ' ಎಂಬ ಪ್ರಾರ್ಥನೆಯನ್ನು ಶ್ರೀಹರಿಯಲ್ಲಿ ಸಲ್ಲಿಸಬೇಕೆಂಬ ಹರಿದಾಸರ ಕರೆ ಭಕ್ತಿಯ ಬೆಳವಣಿಗೆಗೆ ಮಾನಸಿಕ ಶಾಂತಿಗೆ ಹೆದ್ದಾರಿ ಎನ್ನಬಹುದು.

ಶ್ರೀ ವಿಜಯದಾಸರ ತೀರ್ಥಕ್ಷೇತ್ರ ಮಹಿಮಾ ಸುಳಾದಿಗಳು ಒಟ್ಟು 102 ಪ್ರಕಟವಾಗಿವೆ. ಶೀರ್ಷಿಕೆಗೆ ತಕ್ಕಂತೆ ಭರತಖಂಡದ ಪುಣ್ಯನದಿಗಳಾದ ಗಂಗೆ, ಗೋದಾವರಿ, ಕೃಷ್ಣಾ, ಯಮುನಾ, ಕಾವೇರಿ, ತುಂಗಾ, ವರದಾ ನದಿಗಳ ಸ್ತೋತ್ರಗಳೂ, ತಿರುಪತಿ, ಪಂಢರಾಪುರ, ಉಡುಪಿ, ಶ್ರೀಮುಷ್ಣ, ಶ್ರೀರಂಗ, ಅನಂತಗಿರಿ, ಕನ್ಯಾಕುಮಾರಿ, ರಾಮೇಶ್ವರ, ಅಹೋಬಲ, ಶ್ರೀಶೈಲ, ಮಹಾನಂದಿ, ಹಂಪೆ, ನಿವರ್ತಿಸಂಗಮ, ಕಂಚಿ, ಕುಂಭಕೋಣ, ಅರುಣಾಚಲ, ಮಧ್ಯಾರ್ಜುನ, ಮಧುರೆ, ಕುರಂಗ, ಶುಚೀಂದ್ರ, ತೋತಾದ್ರಿ, ಘಟಿಕಾಚಲ, ಮನ್ನಾರ್. ಕದರಿ. ವಲ್ಲಲ, ಸುಬ್ರಹ್ಮಣ್ಯ, ಕೋಟೇಶ್ವರ, ಹರಿಹರ, ಪ್ರಯಾಗ, ಕಾಶಿ, ಗಯಾ, ವಿಷ್ಣುಪಾದ — ಮೊದಲಾದ ಕ್ಷೇತ್ರಗಳ ಪರಿಚಯ ಮತ್ತು ಅಲ್ಲಿನ ಕಥೆಗಳನ್ನು ವಿವರವಾಗಿ ಈ ಸುಳಾದಿಗಳಲ್ಲಿ ವಿವರಿಸಿದ್ದಾರೆ. ಭರತಖಂಡದ ತೀರ್ಥ ಕ್ಷೇತ್ರಗಳ ವಿಚಾರವನ್ನು ಈ ರೀತಿ ಕನ್ನಡದಲ್ಲಿ ಪರಿಚಯ ಮಾಡಿಕೊಟ್ಟಿರುವದಲ್ಲಿ ವಿಜಯದಾಸರು ಮೊದಲಿಗರಾಗಿದ್ದಾರೆ. ಈ ಪ್ರಕರಣದಲ್ಲಿ ಅತಿ ಹೆಚ್ಚು ಸುಳಾದಿಗಳು (ಮೂವತ್ತೇಳು) ತಿರುಪತಿಯನ್ನು ಕುರಿತು ರಚನೆ ಮಾಡಿರುವುದು.

ಉಪಾಸನ ಭಾಗ ಸುಳಾದಿಗಳು ಆ ಹೆಸರಿನ ಸಂಪುಟದಲ್ಲಿ 5: ಪ್ರಕಟವಾಗಿದೆ. ಪರಮಾತ್ಮನನ್ನು ಮನಸ್ಸಿನಲ್ಲಿ ಚಿಂತಿಸುವುದಕ್ಕೆ ಉಪಾಸನೆ ಎನ್ನುತ್ತಾರೆ.

ಈ ಭಾಗದಲ್ಲಿರುವ ಹೆಚ್ಚು ಸುಳಾದಿಗಳು ವೈರಾಗ್ಯ ಜೀವನದ ಕಡೆ ಮನಸ್ಸು ಕೊಟ್ಟು ಬಿಂಬೋಪಾಸನೆ ಮಾಡಬಯಸುವವರಿಗೆ ದಾರಿದೀಪವಾಗಿದೆ. ನಾಡಿ ವಿಚಾರ, ಗುರುಮಂತ್ರಗೋಳಕ ಚಿಂತನೆಯೇ ಮೊದಲಾದ ಅಪೂರ್ವ ವಿಚಾರಗಳು ಇಲ್ಲಿದೆ.

ಪ್ರಮೇಯ ಭಾಗದಲ್ಲಿ ಕೇವಲ 29 ಸುಳಾದಿಗಳಿವೆ. ಪ್ರಮೇಯ ಎಂದರೆ ಯಥಾರ್ಥವಾದ ವಿಚಾರ ಸಿದ್ಧಾಂತಗಳಲ್ಲಿ ಹೇಳಲಾಗುವ ಕೆಲವು ತತ್ತ್ವಗಳು. ಕೆಲವೊಮ್ಮೆ ಅನೇಕ ಪ್ರಶ್ನೆಗಳನ್ನುಂಟು ಮಾಡಿ ಯಾವುದು ಸರಿ? ಅದು ಹೇಗೆ ಸರಿಯಾದುದು? ಎಂಬ ಪ್ರಶ್ನೆ ಮನ್ನುಂಟುಮಾಡುತ್ತವೆ ಆ ರೀತಿ ಕೆಲವು ಸಂದಿಗ್ಧ ವಿಷಯಗಳಿಗೆ ಸಮರ್ಪಕವಾದ ವಿವರಣೆ ನೀಡಿ ಆ ಸಂದಿಗ್ಧತೆಯನ್ನು ದಾಸರು ಇಲ್ಲಿ ಪರಿಹರಿಸಿದ್ದಾರೆ.

ಮುಕ್ತಿಯೋಗ್ಯ ಜೀವರಿಗೂ, ತಮೋಯೋಗ್ಯ ಜೀವರಿಗೂ ಶ್ರೀಹರಿಯೇ ಬಿಂಬ ಮೂರ್ತಿ ಎಂಬ ಸಿದ್ಧಾಂತ ಹೇಳುತ್ತದೆ. ಬಿಂಬಕ್ರಿಯೆಯಂತೆ ಪ್ರತಿಬಿಂಬ ಕೆಲಸ ಮಾಡುವುದರಿಂದ ತಮೋಯೋಗ್ಯರು ಮಾಡುವ ಕಾರ್ಯಗಳಿಂದುಂಟಾಗುವ ಪಾಪ ಫಲಕ್ಕೆ ಬಿಂಬನೂ ಬಾಧ್ಯನಾಗಬೇಕೆಂದು ವಾದವನ್ನು ಹೂಡಬಹುದು. ಅದರೆ ಬಿಂಬನೆನಿಸಿರುವ ವಿಷ್ಣುವಿಗೆ ಪಾಪಲೇಪವಿಲ್ಲ, ಇದು ಅನ್ಯಾಯವೆಂದು ವಾದಿಸಲು ಅವಕಾಶವಿದೆ. ಈ ಪ್ರಮೇಯವನ್ನು ವಿಜಯದಾಸರು ಹೀಗೆ ಬಿಡಿಸಿದ್ದಾರೆ.

ಮುಕ್ತಿ ತಮೋಯೋಗ್ಯ ಬಿಂಬ ಹರಿಯಾದಡೆ
ಸಕಲ ಕರ್ಮಗಳ ಹರಿ ಉಣಲು ಬೇಕು
ಯುಕುತಿ ಕೈಗೊಳ್ಳದು ......................
......................................
ಮಕ್ಕಳ ಪಡೆದ ತಂದೆ ಅವರಿಗೆ ವೈವಾಹ
ಸುಖದಿಂದ ಮಾಡುವ ...................
......................................
ಸಕಲ ಭೋಗಗಳು ಆ ಸತಿ ಸಂಗಡ
ಸುಖಬಡುವ ಮಾಡಿಕೊಂಡವನೊಬ್ಬನೆ

ಇದರಂತೆಯೇ ಶ್ರೀಹರಿಯು ಸರ್ವೋತ್ತಮತ್ವ, ವ್ಯಾಪ್ತತ್ವ, ಪ್ರೇರಕಶಕ್ತಿಯೇ ಮೊದಲಾದ ವಿಚಾರಗಳನ್ನು ವಿವರಿಸಿದ್ದಾರೆ.

ಸಾಧನಭಾಗದಲ್ಲಿ 108 ಸುಳಾದಿಗಳಿದ್ದು ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ. 'ಸಾಧನೆ' ಎಂದರೆ ಜೀವಾಂತರ್ಗತ ಬಿಂಬಮೂರ್ತಿಯ ದರ್ಶನಕ್ಕಾಗಿ ಮಾಡುವ ನಿಷ್ಕಾಮ ಕರ್ಮಗಳು. ಇವು ಸತ್ಸಾಧನೆ. ಮನುಷ್ಯನಿಗೆ ಬಿಂಬ ಮೂರ್ತಿಯ

ಡಾ॥ ಕೆ. ಗೋಕುಲನಾಥ್

ದರ್ಶನ ಪಡೆಯಬೇಕೆಂಬ ಆಸೆ ಉಂಟಾಗುವುದೇ ವಿರಳ. ಆಸೆಯುಂಟಾಗಿ ಅಲ್ಪಸ್ವಲ್ಪ ಸಾತ್ವಿಕ, ವಿಧಿವಿಹಿತ ಕರ್ಮಗಳಾಚರಣಾಸಕ್ತರಾದರೂ, ಆ ಬುದ್ಧಿ ಹೆಚ್ಚುಕಾಲ ನಿಲ್ಲುವುದು ಅಸಾಧ್ಯ; ಏಕೆಂದರೆ ಲೌಕಿಕವಾದ ಕಷ್ಟ, ಪರಂಪರೆಗಳನ್ನೆದುರಿಸುವ ಮನಸ್ಸಿಲ್ಲದೆ ಚಿತ್ತ, ಭೋಗದ ಕಡೆ ವಾಲಿ ನಿಷ್ಕಾಮಕರ್ಮಗಳನ್ನು ಚರಿಸುವುದನ್ನು ನಿಲ್ಲಿಸಿ, ಕಾಮ್ಯ ಕರ್ಮಾಸಕ್ತನಾಗಬೇಕೆಂಬ ಬಯಕೆ ಸುಲಭವಾಗಿ ಅಂಕುರಿಸುತ್ತದೆ. ಕ್ಷಣಿಕವಾದ ಲೌಕಿಕ ಸುಖವನ್ನು ಮರೆತು, ಯಾವ ಬಗೆಯ ಕಷ್ಟ ಕಾರ್ಪಣ್ಯಗಳೊದಗಿದರೂ ಬಿಂಬಾಪರೋಕ್ಷಕ್ಕೆ ಬೇಕಾದ ನಿಷ್ಕಾಮಕರ್ಮಗಳನ್ನಾಚರಿಸಿ ಸಕಲ ಸತ್ಕರ್ಮಗಳನ್ನು ಶ್ರೀಹರಿ ಪ್ರೀತ್ಯರ್ಥ ಮಾಡುವ ದೃಢ ನಿಶ್ಚಯವನ್ನು ಮನಸ್ಸಿನಲ್ಲಿ ಕಾಪಾಡಿಕೊಂಡರೆ ಮಾತ್ರ ಸಾಧನಾ ಮಾರ್ಗದಲ್ಲಿ ನಡೆದಂತಾಗುತ್ತದೆ. ಇದಕ್ಕೆ ಅರಿಷಡ್ವರ್ಗಗಳನ್ನು ಜಯಿಸಿ, ಹರಿಭಕ್ತರನ್ನು ನಿಂದಿಸದೆ, ಶ್ರೀ ಹರಿಕೊಟ್ಟುದರಲ್ಲಿ ತೃಪ್ತಿ ಹೊಂದಿ ಶಾಂತ ಜೀವನವನ್ನು ಮಾಡಬೇಕಾಗುತ್ತದೆ. ಆಗ ಅಂತಹ ವ್ಯಕ್ತಿ ಹರಿದಾಸನೆನಿಸಿ ಕೊಳ್ಳುವನೆಂದು, ಹರಿಭಕ್ತರ ಲಕ್ಷಣವನ್ನು ದಾಸರು 'ಹರಿದಾಸರ ಲಕ್ಷಣ ಇರಬೇಕು ಈ ಪರಿ' ಎಂಬ ಸುಳಾದಿಯಲ್ಲಿ ತಿಳಿಸಿದ್ದಾರೆ. ಸಾಧನೆಗೆ ಅಡ್ಡ ಬರುವ ಇನ್ನೂ ಅನೇಕ ವಿಷಯಗಳನ್ನು ಸಾಧಕರ ಜೀವನವನ್ನು ವಿಮರ್ಶಿಸಿ ತಿಳಿಸಿ ಅಂತಹ ದುರ್ಮಾಗವಶರಾಗಬಾರದೆಂಬ ಅವರ ಎಚ್ಚರಿಕೆ ಈ ಸುಳಾದಿಗಳಲ್ಲಿ ಹೃದಯಸ್ಪರ್ಶಿಯಾಗುವಂತಿದೆ.

ಸ್ತೋತ್ರಭಾಗದಲ್ಲಿ ಎಂಭತ್ತು ಸುಳಾದಿಗಳಿವೆ. ಈ ಹೆಸರಿಗೆ ತಕ್ಕಂತೆ ವಿಷ್ಣುವಿನ ದಶಾವತಾರಗಳ ಸ್ತೋತ್ರ, ಧನ್ವಂತ್ರಿ, ಹಯಗ್ರೀವ, ದತ್ತ, ಕಪಿಲ ವೇದವ್ಯಾಸ, ಮತ್ತು ಶ್ರೀಹರಿಯ ವಿವಿಧರೂಪಗಳನ್ನು ಕುರಿತ ಸ್ತೋತ್ರಗಳೊಡನೆ, ವಾಯು, ಮಧ್ವ, ಹನುಮ, ವಾದಿರಾಜರು, ಜಯರಾಯರು, ಶ್ರೀಪಾದರಾಜರು, ವ್ಯಾಸರಾಜರು, ಪುರಂದರದಾಸರು ಇವರನ್ನು ಕುರಿತ ಸ್ತೋತ್ರ ಸಾಹಿತ್ಯ ಅಧಿಕವಾಗಿದೆ. ಭಾರತ, ರಾಮಾಯಣ, ಮತ್ತು ಭಾಗವತ ಗ್ರಂಥಗಳಲ್ಲಿ ಉಕ್ತವಾಗಿರುವ ಶ್ರೀಹರಿವಾಯುಗಳ ಕಥಾ ಸಾರಾಂಶ ಅನೇಕ ಕಡೆಗಳಲ್ಲಿ ಹಿತಮಿತವಾಗಿ ಕೊಟ್ಟಿರುವರು.

ತಾರತಮ್ಯಸಾರ ಎಂಬ ಸಂಪುಟದಲ್ಲಿ ವಿಜಯದಾಸರ ಹದಿನೆಂಟು ಸುಳಾದಿಗಳಿವೆ. ಈ ಭಾಗದಲ್ಲಿ ಜೀವರ ಅಪರೋಕ್ಷಾನುಭವದ ರೀತಿಯನ್ನು ವಿವರಿಸಿದ್ದಾರೆ. ಆಯಾ ಜೀವರ ಯೋಗ್ಯತಾನುಸಾರ ಅವರವರಿಗೆ ಧ್ಯಾನಮಾಡಿದಾಗ ಬಿಂಬಮೂರ್ತಿ ದರ್ಶನ, ಬಿಂಬಾಪರೋಕ್ಷದ ತರುವಾಯ ಪರಮಾತ್ಮನ ಆಕೃತಿಯಗಾತ್ರ, ಅಪರೋಕ್ಷಾನುಭವದ ಕಾಲಮಿತಿ ಎಷ್ಟೆಂಬುದರ ವಿವರಣೆ ಇಲ್ಲಿದೆ. ತೃಣ ಜೀವರಿಂದ ಬ್ರಹ್ಮದೇವರವರೆಗಿನ ವಿವಿಧ ಕಕ್ಷೆಗಳಲ್ಲಿರುವ ಜೀವರ ಆನಂದ ಸ್ವರೂಪದ ವಿವರಣೆ ಇರುವುದು ಇಲ್ಲಿನ ವೈಶಿಷ್ಟ್ಯ. ತತ್ತ್ವಾಭಿಮಾನಿ ದೇವತೆಗಳ ಸ್ತೋತ್ರ, ಆರೋಹಣ ಮತ್ತು ಅವರೋಹಣ ತಾರತಮ್ಯ, ದೇವತೆಗಳ ಸ್ತೋತ್ರ, ನದೀತಾರತಮ್ಯ ವಿಚಾರಗಳು ಇಲ್ಲಿ ಅಡಗಿದೆ.

ವಿಜಯದಾಸರು ಸುಳಾದಿಗಳಲ್ಲಿ ತಂತ್ರಸಾರೋಕ್ತ ಚಕ್ರಾಬ್ಜ ಮಂಡಲದ ವಿವರಣೆಯನ್ನು ಕೊಟ್ಟಿದ್ದಾರೆ, ಇದರ ವಿಚಾರವನ್ನು ವಿವರಿಸಿರುವ ಸುಳಾದಿಗೆ 'ಕಂಕಣಾಕಾರ ಸುಳಾದಿ' ಎಂದೂ ಕರೆಯುವುದುಂಟು. ಶ್ರೀಹರಿಯ ಸ್ಮರಣೆಯನ್ನು ವರ್ಣಗಳಲ್ಲಿ, ಘಳಿಗೆ, ನಕ್ಷತ್ರ, ದಿನ, ವಾರ, ಪಕ್ಷ, ಮಾಸ, ಋತು, ಅಯನ, ಸಂವತ್ಸರಗಳಗಳಲ್ಲಿ ಚಿಂತಿಸಬೇಕೆಂಬ, ವಿವರಣೆ ಇದರಲ್ಲಿದೆ. ಅತಿ ಗಹನವಾದ, ಮಂತ್ರಗಳ ವಿಚಾರ ಇದರಲ್ಲುಂಟು; ಚಕ್ರಾಬ್ಜ ಮಂಡಲದ ಚಿತ್ರ ಶ್ರೀವಿಜಯದಾಸರು – ಜೀವನ ಮತ್ತು ಕೃತಿಗಳ ಸಮೀಕ್ಷೆ ಎಂಬ ಗ್ರಂಥದಲ್ಲಿದೆ. ಚಕ್ರಾಬ್ಜ ಮಂಡಲದಲ್ಲಿ ಏಳು ಕೋಟಿ ಮಂತ್ರಾರ್ಥ ಉಂಟು ಎಂದು ವಿಜಯದಾಸರೇ ಹೇಳಿದ್ದಾರೆ. ಸಾಧಕರಿಗೆ ಇದು ಬೆಲೆಯುಳ್ಳ ವಸ್ತುವಾಗಿದೆ.

ಶ್ರೀವಿಜಯದಾಸರ ಸುಳಾದಿಗಳ ಪರಿಚಯಾತ್ಮಕ ಲೇಖನ ರಚನೆಗೆ ಕೈಹಾಕಿದಾಗ, ಅದರಲ್ಲಿ ಅಡಗಿರುವ ವಿಚಾರಗಳನ್ನು ಸಂಗ್ರಹಿಸುವುದು ತುಂಬ ಕಷ್ಟದ ಕಾರ್ಯವೆನಿಸಿತು. ಏಕೆಂದರೆ ಈ ಸುಳಾದಿಗಳಲ್ಲಿ ಅಡಗಿರುವ ವಿಷಯ ಬಾಹುಳ್ಯ ಹಾಗಿದೆ. ಇದೊಂದು ಜ್ಞಾನದ ಗಣಿ, ಆ ಗಣಿಯಲ್ಲಿ ದುಡಿದಷ್ಟು ಲಾಭಹೆಚ್ಚು. ಒಂದೊಂದು ಸುಳಾದಿಯನ್ನು ಕುರಿತು ಹತ್ತಾರು ಪುಟಗಳಷ್ಟು ವ್ಯಾಖ್ಯಾನ ಬರೆಯುವ ಅವಕಾಶವಿರುವಾಗ ಸಮಸ್ತ ಸುಳಾದಿ ಸಾಹಿತ್ಯದ ಪರಿಚಯ ಪುಟ್ಟ ಲೇಖನದಲ್ಲಿ ಅಸಾಧ್ಯವೇ ಸರಿ. ಈ ಪ್ರಬಂಧದಲ್ಲಿ ವಿಜಯದಾಸರ ಸುಳಾದಿಗಳಲ್ಲಿರುವ ಅತ್ಯಲ್ಪ ಅಂಶದ ಪರಿಚಯವನ್ನುಂಟು ಮಾಡಲು ಸಾಧ್ಯವಾಗಿದೆ ಎನಿಸುತ್ತದೆ.



# ವ್ಯಾಸವಿಠಲರ ಬದುಕು ಬರಹ

ದಾಸಸಾಹಿತ್ಯದ ದ್ವಿತೀಯ ಘಟ್ಟದಲ್ಲಿ ವಿಜಯದಾಸರು ಕೇಂದ್ರಬಿಂದುವಾಗಿ ಸಮಾಜದ ಓರೆಕೋರೆಗಳನ್ನು ತಿದ್ದಿ, ಸ್ವತಃ ಆದರ್ಶವಾಗಿ ಅನೇಕರನ್ನು ಉದ್ಧಾರ ಮಾಡಿದ್ದಾರೆ. ಮಾನವಜೀವಿಗಳ ಯೋಗ್ಯತೆಗಳನ್ನು ಅರಿತು, ಅವರ ವಿಕಾಸಕ್ಕೆ ಅಡ್ಡಿಯಾಗಿರುವ ಮಾನವ ಸಹಜದೋಷಗಳನ್ನು ನಿವಾರಣೆಮಾಡಿ ಅವರ ವ್ಯಕ್ತಿತ್ವ ವಿಕಾಸಗೊಳಿಸಿದ್ದಾರೆ. ಅರ್ಥವಿಲ್ಲದ ಕೇವಲ ಪಾಂಡಿತ್ಯಕ್ಕಿಂತಲೂ ಸದಾಚಾರದಿಂದ ಬಂದ ಅನುಭವವು ಶ್ರೇಷ್ಠವಾದ ಮಾನವ ವೇದಾಂತವೆಂದು ಬಾಳಿದ್ದಾರೆ. ಈ ದಿಸೆಯಲ್ಲಿ ಕಲ್ಲೂರು ಸುಬ್ಬಣ್ಣಾಚಾರ್ಯರ ಬದುಕು ಬರಹಗಳು ವಿಜಯದಾಸರ ಕೃಪಾಕಟಾಕ್ಷದಿಂದ ಸುಂದರಗೊಂಡಿವೆಯೆಂದು ಇಲ್ಲಿ ನೆನೆಯಬಹುದು.

ಕಲ್ಲೂರ ಸುಬ್ಬಣ್ಣಾಚಾರ್ಯರು ರಾಯಚೂರು ಜಿಲ್ಲೆಯ ಮಾನ್ವಿತಾಲ್ಲೂಕಿನ ಕಲ್ಲೂರ ಗ್ರಾಮದಲ್ಲಿ ಸಾಧನಾ ಜೀವಿಗಳಾಗಿ ಬದುಕಿದವರು. ಪುಣೆಯ ಪೇಶ್ವೆಗಳು ಇವರಿಗೆ, ಇವರು ದಾಸತ್ವ ಸ್ವೀಕರಿಸುವ ಮುನ್ನ ಆಶ್ರಯದಾತರಾಗಿದ್ದರು. ಸಂಸ್ಕೃತದಲ್ಲಿ ಇವರು ಪ್ರಕಾಂಡ ಪಂಡಿತರು. ವೇದಶಾಸ್ತ್ರ ಪುರಾಣಗಳಲ್ಲಿ ಎತ್ತಿದ ಕೈ. ಮಧ್ವಶಾಸ್ತ್ರದ ಸೂಕ್ಷ್ಮಸೂಕ್ಷ್ಮಗಳನ್ನು ಬಲ್ಲವರು. ಈ ಹಿನ್ನೆಲೆಯಲ್ಲಿ ಪ್ರತಿವರ್ಷ ತಮ್ಮ ಶಿಷ್ಯರಿಗೆ ಶ್ರೀಮನ್ನ್ಯಾಯಸುಧೆಯನ್ನು ಪಾಠಹೇಳಿ ಮಂಗಳಮಾಡುವುದು ನಡೆದುಬಂದ ವಿಧಿಯಾಗಿಬಿಟ್ಟಿತ್ತು.

ಈ ಕಾಲಕ್ಕಾಗಲೇ ವಿಜಯದಾಸರು ತಮ್ಮ ಚಾರಿತ್ರ್ಯದಿಂದ ಸಾಧನೆಯಿಂದ ಲೋಕಮನ್ನಣೆಯನ್ನು ಪಡೆದಿದ್ದರು. ವೇದಶಾಸ್ತ್ರ, ಪುರಾಣಗಳ ತಿರುಳನ್ನು ಬಲ್ಲವರಾಗಿದ್ದು ಜೊತೆಗೆ ಬದುಕಿನಲ್ಲಿ ನಂಬಿಗೆಯನ್ನು ತಾವು ದೃಢಪಡಿಸಿಕೊಂಡಿದ್ದರಲ್ಲದೆ ತಮ್ಮ ಪರಿಸರದಲ್ಲೆಲ್ಲ ಅದನ್ನೇ ಬಿತ್ತಿ ಬೆಳೆದವರು. ಅದಕ್ಕಾಗಿ ವೇದ ಶಾಸ್ತ್ರ ಪುರಾಣಗಳ ಸಾರಸರ್ವಸ್ವವನ್ನು, ಪುರಂದರ ಮಾರ್ಗದಲ್ಲಿ ನಡೆದು ಕನ್ನಡದ ಪದ ಸುಳಾದಿಗಳ ಮುಖಾಂತರ ಜನತೆಗೆ ನೀಡಿ ಆತ್ಮವಿಶ್ವಾಸವನ್ನು ಬೆಳೆಸಿದವರು. ಊರು ಊರು ತಿರುಗಿ ಜಾಗೃತಿಯನ್ನುಂಟು ಮಾಡಿದವರು. ಭಗವಂತನ ಸಖ್ಯವನ್ನು, ವಾತ್ಸಲ್ಯವನ್ನು ದಾಸಮಾರ್ಗದಿಂದ ಮನುಷ್ಯನು ತಾನಿರುವಲ್ಲಿಯೇ ತಂದು ನೀಡಿದವರು. ಇಂತಹ ವ್ಯಕ್ತಿತ್ವವನ್ನು ಕುರಿತು ಸಂಪ್ರದಾಯ ಶರಣರಾಗಿ ಬೆಳೆಯುತ್ತಿದ್ದವರಿಗೆ ಸಹನೆ ಇರಲಿಲ್ಲ. ಭಗವಂತನ ಅನುಗ್ರಹ ಪಡೆಯಬೇಕಾದರೆ ಕೇವಲ ಸಂಸ್ಕೃತದಲ್ಲಿರುವ ವೇದಶಾಸ್ತ್ರ ಪುರಾಣಗಳಿಂದ ಮಾತ್ರ ಸಾಧ್ಯವೆಂದು ಕನ್ನಡದ ಪದ ಸುಳಾದಿಗಳನ್ನು ತಾತ್ಸಾರವಾಗಿ ಕಾಣುತ್ತಿದ್ದರು. ಅಷ್ಟೇ ಅಲ್ಲ, ದೇವೀ ಪೂಜೆಗೆ ಕನ್ನಡ ಮಾಧ್ಯಮವು ಪೈಲಿಗೆ ಎಂಬುದು ಇನ್ನೂ ಬಲವಾಗಿಯೇ ನಂಬಿದ್ದ ಜನರಿದ್ದ ಕಾಲವದು. ಅಂತಹ ಸಮಯದಲ್ಲಿ ಸುಬ್ಬಣ್ಣಾಚಾರ್ಯರಲ್ಲಿ ವಿಜಯದಾಸರನ್ನು ಕುರಿತು ಗೌರವವು ಲೋಪವಾಗಿದ್ದುದು ಸಹಜವೇ ಸರಿ. ತಾವು ಇಷ್ಟು ಪಂಡಿತರಾಗಿದ್ದರೂ ತಮಗೆ ಜನ ಪ್ರಿಯತೆಯಿಲ್ಲವೆಂಬ ಕೊರಗಿನ ಜೊತೆಗೆ ವಿಜಯದಾಸರ ಪ್ರತಿಭೆ ಜನಪ್ರಿಯತೆಗಳು ಅವರಲ್ಲಿ ಹೊಟ್ಟೆಯಕಿಚ್ಚನ್ನು ಎಬ್ಬಿಸಿದ್ದವು. ಹೇಗಾದರೂ ಮಾಡಿ ಅವರ ಮುಖಭಂಗ ಮಾಡುವ ಯೋಜನೆಯಲ್ಲಿಯೇ ಅವರು ಇದ್ದರು. ಅಂತೆಯೇ ಮೂರುನಾಲ್ಕುಸಲ ಸುಧಾಮಂಗಳಕ್ಕೆ ಆಗಮಿಸಲು ವಿಜಯದಾಸರಿಗೆ ಆಹ್ವಾನ ಕಳಿಸಿದ್ದರು. ಆದರೆ ಅವರು ಸಮಾರಂಭಕ್ಕೆ ಬಂದು ಪ್ರಸಾದ ಸ್ವೀಕರಿಸಿ ಹೋದುದು ಯಾರಿಗೂ ಗೊತ್ತಾಗಿರಲಿಲ್ಲ. ಒಂದು ಸಲ ಮಾನ್ವಿಯಲ್ಲಿ ಈ ಇಬ್ಬರು ಪರಸ್ಪರ ಸಂದರ್ಶಿಸುವ ಯೋಗ ಬಂದಾಗ ಈ ಹಿಂದೆ ಸುಧಾಮಂಗಳ ಸಂದರ್ಭದಲ್ಲಿ ಒಮ್ಮೆಯೂ ಭಾಗವಹಿಸಿ ತಮ್ಮನ್ನು ಕಾಣುವಷ್ಟು ವಿನಯ ಮೆರೆಯಲಿಲ್ಲವೆಂಬ ಆಕ್ಷೇಪಣೆಯನ್ನು ಸುಬ್ಬಣ್ಣಾಚಾರ್ಯರು ಧ್ವನಿಸಿ ಈ ಸಲವಾದರೂ ಸುಧಾಮಂಗಳ ಸಮಾರಂಭದಲ್ಲಿ ಅವಶ್ಯವಾಗಿ ವಿಜಯದಾಸರು ಭಾಗವಹಿಸಿ, ತಮ್ಮನ್ನು ಅಲ್ಲಿ ಕಾಣಬೇಕೆಂದು ಸೂಚಿಸಿ ಅಧಿಕಾರ ಬೆರೆತ ಆಹ್ವಾನವನ್ನಿತ್ತರು. ಆಗ ವಿಜಯದಾಸರು ಆಚಾರ್ಯರಿಗೆ ಪಕ್ವಕಾಲ ಒಂದಿತೆಂದು ಭಾವಿಸಿ ಅಂತೆಯೇ ಮಾಡಲು ಯೋಚಿಸಿದರು.

ಈ ಪಕ್ವಕಾಲದಲ್ಲಿ ನಡೆದ ಘಟನೆಯು ಆಚಾರ್ಯರ ಜೀವನದಲ್ಲಿ ಅರುಣೋದಯವನ್ನು ತಂದಿತು. ಅದಕ್ಕೆ
ಮಾತ್ಮನು ವಿಜಯದಾಸರ ಮು



ಶ್ರೀ ವಸಂತಕುಷ್ಟಗಿ

ಕರುಣಾಮಯಿ ಆದುದೇ ಕಾರಣ. ಆ ಕರುಣೆಯು, ಸುಧಾ ಮಂಗಳದಂಪು ಮುಂಡಿಗೆಯನ್ನು ಮಾಡುವ ಅಡಿಗೆಯವನು ಬಾರದೇ ಇದ್ದಾಗ ವಿಜಯದಾಸರು ಆ ಕಾರ್ಯವನ್ನು ಗುಪ್ತವೇಷದಲ್ಲಿ ನಿರ್ವಹಿಸುವಲ್ಲಿ ಪ್ರಕಟವಾಯಿತು. ಅದು ಅನೇಕರಿಗೆ ತಿಳಿದು ಅವರು ವಿಜಯದಾಸರಿಗೆ ತಮ್ಮ ಗೌರವವನ್ನು ಸೂಚಿಸಿದರು. ಇದು ನಡೆದ ಕೆಲವು ನಿಮಿಷಗಳಲ್ಲಿ ಆಚಾರ್ಯರು ಶ್ರೀಸುಧಾಮಂಗಳಕ್ಕಾಗಿ ಪ್ರವಚನ ಮಾಡುತ್ತಿರುವಾಗ ಒಂದು ಕಡೆಗೆ ಅನುವಾದ ನಿಂತುಹೋಯಿತು. ಆಗ ಅಲ್ಲಿ ವಿಜಯದಾಸರು ಕುಳಿತಿರುವುದನ್ನು ಕಂಡು ಮತ್ತಷ್ಟು ಕತ್ತುಹಿಡಿದುಕೊಳ್ಳುವಂತಾಯಿತು. ಆವರೆದರು ತಮ್ಮ ಗೌರವವು ಜನರಲ್ಲಿ ಕಡಿಮೆಯಾಯಿತೆಂದು, ಯೋಗ್ಯತೆಯ ಬೆಲೆಯನ್ನು ಕಟ್ಟಿದ ಹಾಗೆ ಆಯಿತೆಂದು ಭಾವಿಸಿದರು. ಆಗ ತಕ್ಷಣ ವಿಜಯದಾಸರು ದಡ್ಡನೆಂದು ಪರಿಗಣಿಸಿದ್ದ ಪರಿಚಾರಕನ ಕೈಹಿಡಿದು ಅವನ ಕಡೆಯಿಂದ ನಿಂತುಹೋಗಿದ್ದ ಶ್ರೀ ಸುಧಾ ಅನುವಾದ ಕಾರ್ಯವನ್ನು ಪೂರ್ಣಗೊಳಿಸಿದರು. ದಾಸರು ಆತನನ್ನು ಹಿಡಿದ ಕೈಯನ್ನು ತಿರುಗಿ ತೆಗೆದುಕೊಂಡ ಮೇಲೆ ಆ ಪರಿಚಾರಕ ಮತ್ತೆ ಯಥಾವಿಧಿಯಾದನು.

ಈ ಘಟನೆಯ ನಿರೂಪಣೆಯು ಬೇರೆಬೇರೆ ರೀತಿಯಿದ್ದರೂ ಈ ಘಟನೆಯ ಹಿನ್ನೆಲೆಯಲ್ಲಿ ಆಚಾರ್ಯರು ಪಶ್ಚಾತ್ತಾಪದ ಹೊನಲಲ್ಲಿ ಪಾವನರಾಗಿ, ದೃಷ್ಟಿಯನ್ನು ಶುದ್ಧಗೊಳಿಸಿಕೊಂಡು, ಮನಸ್ಸಿನಲ್ಲಿ ಆನಂದವನ್ನು ಹೊಂದಿ ತಾವೂ ದಾಸರಾಗುವ ಅಪೇಕ್ಷೆಯನ್ನು ವ್ಯಕ್ತಮಾಡಿದರು. ಪಶ್ಚಾತ್ತಾಪವು ಜ್ಞಾನಿಗಳನ್ನೂ ಹೃದಯವಂತರನ್ನಾಗಿ ಮಾಡುತ್ತದೆಂಬುದನ್ನು ನಂಬಿದ್ದ ವಿಜಯದಾಸರು ಅವರಿಗೆ ಕಂಕಣಾಕಾರ ಸುಳಾದಿಯನ್ನು ಬೋಧಿಸಿದರು. ಆಚಾರ್ಯರಲ್ಲಿ ಇದುವರೆಗೆ ಆವರಿಸಿದ್ದ ಅಹಂಕಾರವು ಆಗ ನಿರಸನವಾಗಿ ಅವರಲ್ಲಿ ವೈರಾಗ್ಯೋದಯವಾಗಿರುವುದನ್ನು ಕಂಡು ಅವರಿಗೆ,

ಬೂದಿಮುಚ್ಚಿದ ಕೆಂಡದಂತಿಪ್ಪರು
ಈ ಧರೆಯು ಮೇರೆ ಶ್ರೀ ಹರಿಭಕ್ತರು

– ಎಂದು ಹರಿದಾಸರ ಲಕ್ಷಣಗಳನ್ನು ತಿಳಿಸಿ ವಿಜಯದಾಸರು 'ವ್ಯಾಸವಿಠಲ' ಎಂಬ ಆ ಅಂಕಿತವನ್ನು ಕಲ್ಲೂರ ಸುಬ್ಬಣ್ಣಾಚಾರ್ಯರಿಗೆ ಕರುಣಿಸಿದರೆಂದು ತಿಳಿದು ಬರುತ್ತದೆ. ಆದರೆ ಮತ್ತೊಂದು ಕಡೆಗೆ ಇವರಿಗೆ ಅಂಕಿತ ಪ್ರಧಾನವು ವೇಣುಗೋಪಾಲದಾಸರಿಂದ ನಡೆಯಿತೆಂದು ಉಲ್ಲೇಖಿಸಲಾಗಿದೆ. ಏಕೆಂದರೆ ಕಲ್ಲೂರ ಸುಬ್ಬಣ್ಣಾಚಾರ್ಯರು ಪೂರ್ವಜನ್ಮದಲ್ಲಿ ವೈಕುಂಠದಾಸರ ಶಿಷ್ಯರಾಗಿದ್ದ ನಂಜುಂಡ ಮತ್ತು ಈ ಜನ್ಮದಲ್ಲಿ ವೇಣುಗೋಪಾಲದಾಸರು

ಹಿಂದಿನ ಜನ್ಮದ ವೈಕುಂಠದಾಸರು. ಅಂತೆಯೇ ವಿಜಯದಾಸರು ಆಚಾರ್ಯ ರನ್ನು ವೇಣುಗೋಪಾಲದಾಸರ ಹತ್ತಿರ ಕಳಿಸಿ ಅಂಕಿತಕೊಡಿಸಿದುದೆಂದು ಗ್ರಹಿಕೆ. ಅದಕ್ಕಾಗಿ ಕೆಳಗಿನ

ಶ್ರೀ ವ್ಯಾಸವಿಠಲ ಆಶ್ರಿತ ಕಲ್ಪತರು
ನೀವೊದಗಿ ಪಾಲಿಸುವುದೋ

ಎಂಬ ಪದವು ಆಧಾರನೀಡುತ್ತದೆ. ಆದರೆ ಇದು ವೇಣುಗೋಪಾಲದಾಸರ ಪದ ವೆಂಬುದರ ಬಗೆಗೆ ಕಿಂಚಿತ್ ಸಂಶೋಧನೆ ನಡೆದರೆ ಚೆನ್ನು. ಅದೇನೇ ಇದ್ದರೂ ಕಲ್ಲೂರ ಆಚಾರ್ಯರು ವಿಜಯದಾಸರ ಕರುಣಾಕವಚವನ್ನು ಪಡೆದು ನಿಜಪದಿವನ್ನು ಹೊಂದಿದ್ದು ಸತ್ಯವಾದ ಮಾತು. ಅಂತೆಯೇ "ಸ್ಮರಿಸಿ ಬದುಕಿರೋ, ದಿವ್ಯ ಚರಣ ಕೆರಗಿರೋ ದುರಿತ ತರಿದು ಪೊರೆವ ವಿಜಯ ಗುರುಗಳೆಂಬರ" ಎಂಬ ವ್ಯಾಸವಿಠಲರ ವಿಜಯಕವಚವು ತೆರೆತೆರೆಯಾಗಿ ಸದ್ಭಕ್ತರ ನಿರ್ಮಾಣದಲ್ಲಿ ಬಹು ಮಹತ್ವವನ್ನು ಇಂದಿಗೂ ವಹಿಸುತ್ತ ಬಂದಿದೆ. ಅದು ಗುರು ಕಾರುಣ್ಯದ ಗಂಗೆಯನ್ನು ಉಕ್ಕೇರಿಸಿದೆ.

"ದಾಸರಾಯನಾ ದಯನ ಸೂಸಿ
ಪಡೆದನಾ
ದೋಷರಹಿತನಾ ಸಂತೋಷ ಭರಿತನಾ ॥
ಜ್ಞಾನವಂತನಾ ಬಲು ನಿದಾನಿಶಾಂತನಾ
ಮಾನವಂತನಾ ... ... ... ॥

– ಇಲ್ಲಿ ಗುರುಶಿಷ್ಯರ ಸಂಬಂಧ ಎಂತಹ ಗಾಢವಾದ ಸತ್‌ಪರಿಣಾಮವನ್ನು ಪರಂಪರಾ ಗತವಾಗಿ ನೀಡುತ್ತ ಸಾಗಿದೆಯೆಂಬುದನ್ನು ಗಮನಿಸಬಹುದಾಗಿದೆ. ಅಷ್ಟೇ ಅಲ್ಲ ವಿಜಯದಾಸರ ಮಹಾವ್ಯಕ್ತಿತ್ವ ದರ್ಶನವೂ ಇಲ್ಲಿ ನಿರೂಪಿತವಾಗಿದೆ.

ಗುರುಕಾರುಣ್ಯದಿಂದ ಪಾವನಗೊಂಡ ವ್ಯಾಸವಿಠಲರಲ್ಲಿ ಆರ್ತಭಕ್ತಿಯು ಅವ್ಯಾಹತವಾಗಿ ಬೆಳೆದು, ದುರಿತಗಳನ್ನು ಪರಿಹಾರಮಾಡಿಕೊಂಡು, ಪರಮಾತ್ಮನ ದಿವ್ಯಜ್ಞಾನಕ್ಕಾಗಿ ಕಾತರಗೊಂಡ ಭಾವವು ಅವರ ಕೀರ್ತನೆಗಳಲ್ಲಿ ದಾಂಗುಡಿಯಿಡುತ್ತ ಸಾಗಿರುವುದನ್ನು ಕಾಣಬಹುದಾಗಿದೆ. ಈ ಕೆಳಗಿನ ಪದವು ಈ ಮಾತಿಗೆ ಸಾಕ್ಷಿ ನುಡಿಯುತ್ತದೆ.

"ಸತ್ಯ ಸಂಕಲ್ಪ ಸ್ವಾತಂತ್ರ್ಯ ಸರ್ವೇಶ
ಸರ್ವೋತ್ತಮನೆ ಸಾರ್ವಭೌಮ ಸ
ಭೃತ್ಯರಿಗೆ ಒಲಿದು ಪರಿಪರಿ ಭಯಂಗಳ
ಕಳೆದು
ನಿತ್ಯದಲಿ ಕಾವ ಸ್ವಾಮಿ ಪ್ರೇಮಿ ಅ.ಸ.

ಇದರಂತೆ,

ಸುಖವಾಗಲಿ ಬಹುದುಃಖವಾಗಲಿ
ಸಖಸ್ನೇಹಿಗಿರು ಪಾಂಡುರಂಗ
ನಿಖಿಲಾಂತರ್ಗತ ವ್ಯಾಸವಿಠಲ ತವ
ಮುಖಪಂಕಜ ತೋರೋ ಪಾಂಡುರಂಗ

ಎಂಬಲ್ಲಿ ಸಖ್ಯ ಭಾವದತ್ತ ಇವರ ಮನಸ್ಸು ಹಾತೊರೆದಿದೆ. ಮುಂದೆ ಸಂಸಾರದ ತೆರೆಗಳ ಮಧ್ಯದಲ್ಲಿ ಅಂತರ್ಮುಖಿ ಯಾದ ದಾಸರಿಗೆ.

ವ್ಯರ್ಥವಾಯಿತಲ್ಲ ಜನ್ಮವು ಸಾರ್ಥ-
ಕಾಗಲಿಲ್ಲ
ಮುಕ್ತಿ ಬಯಸಲಿಲ್ಲ ಜ್ಞಾನ ವಿರಕ್ತಿಯು
ಮೊದಲಿಲ್ಲ
ಎತ್ತ ತಿಳಿಯದೆ ಸುತ್ತಿ ಭವದೊಳು
ನ್ಮತ್ತ ನಡೆಯಲಿ ಹೊತ್ತು ಕಳೆದೆ ಪೊರೆ॥

– ಎಂದು ಮೊರೆಯಿಡಬೇಕೆನ್ನಿಸುತ್ತದೆ. ಈ ಅಂತರಂಗ ಪರಿಶೀಲನೆಯ ಫಲದಿಂದ ತಾವು ಕಂಡ ದಿವ್ಯ ಜ್ಞಾನವನ್ನು

"ಸಂಸಾರವನು ಮಾಡಿ ಸಕಲ ಜನರು
ಸಂಸಾರಿ ಶ್ರೀ ಕೃಷ್ಣ ಕೈಪಿಡಿದು
ಸಲಹುವನು"

ಎಂದು ನಂಬಿಗೆಯನ್ನು ಹುಟ್ಟಿಸಿ,

ಬುದ್ಧಿಯೆಂತೆಂಬ ಕನ್ನಿಕೆಯ
ಮದುವೆಯ ಮಾಡಿ
ಸದ್ಧರ್ಮದಭಿಮಾನದಿಂದ ಬೆಳೆಸಿ
ಶುದ್ಧ ಭಕ್ತಿಗಳೆಂಬ ಮಕ್ಕಳನು ಪಡೆದು
ಬಹು
ಅದ್ಭುತ ಭವಾಬ್ಧಿಯನು ದಾಟಿರಯ್ಯಾ ॥
ಚಾರು ಸುಜ್ಞಾನವೆಂಬುವ ಮುದ್ದು
ಮಗನ ಪಡೆದು
ವೈರಾಗ್ಯವೆಂಬ ಭಾಗ್ಯವ ಬೇಡಿ
ಸಾರ ಹರಿನಾಮ ರಸಪದಾರ್ಥಗಳನುಣಿಸಿ
ಕಾರುಣ್ಯದಲಿ ಮಕ್ಕಳನು ಬೆಳೆಸಿರಯ್ಯಾ॥
ಯಮನಿಯಮ ಅಷ್ಟಾಂಗ ಅಣಿಮಾದಿ
ಗಳು
ಶಮದಮಾದಿಗಳೆಂಬ ಬಂಧು ಬಳಗ
ಮಮತೆ ಪೆರ್ಚಿಸಿಕೊಂಡು ಬೇಗತನ
ಮೊದಲಾದ
ಅನುರಿಕೆಯ ಸಂಬಂಧವನು ಮಾಡಿ-
ರಯ್ಯಾ॥
ಶೀಲ ಸನಕಾದಿಗಳು ಮುನಿದೇವತಾದಿ
ಗಳು
ತಾಳ ತನ್ಮೊಳಗೆ ಸಮವಿಷಯರಾಗಿ
ಆಲಂಪಟಗಳ್ಬಚ್ಚಿಕೊಂಡು ಭವನಿಧಿ
ದಾಟಿ
ಸಾರೋಪ್ಯ ಮೊದಲಾದ ಮುಕ್ತಿ-
ಗೈದಿದರು॥
ಹೊರಗಿದ್ದ ಪದವಿ ಸತಿಸುತರು ಭಾಗ್ಯವೆ
ನಿಮಗೆ
ಹರಿಯತ್ತ ಕಾಲಕ್ಕೂ ಹೃದಯ-
ದೊಳಗೆ
ಮರೆಯಲಾಗದು ಹಿಂದೆ ಸಂಸಾರದಾ
ಬಂಧ
ದುರಿತಾರಿ ವ್ಯಾಸವಿಠಲನೊಲಿವಾ॥

ಎಂದು ಸಂಸಾರಯೋಗದ ಗುಟ್ಟನ್ನು ಬಹು ನಿಚ್ಚಳವಾಗಿ ಹಾಡುತ್ತ ಜನರಿಗೆ ಆತ್ಮ ವಿಶ್ವಾಸವನ್ನು ಅವರು ಮೂಡಿಸಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

ಸಂಸಾರದಲ್ಲಿ ಆತ್ಮವಿಶ್ವಾಸ ಮೂಡ ಬೇಕಾದರೆ ಹಲವಾರು ಪುಣ್ಯಪುರುಷರ ಜೀವನಚರಿತ್ರೆಗಳನ್ನು ನೋಡಿ ಓದಿ ಪ್ರಭಾವಿತರಾಗಬೇಕಾಗುವುದು ಸಾಧನಾ ಜೀವಿಯ ಪ್ರಗತಿಯ ಒಂದು ಘಟ್ಟ. ಇಲ್ಲಿ ಶ್ರೀ ವ್ಯಾಸ ವಿಠಲರು,

"ದಯದಿ ಪಾಲಿಸೋ ಜಯತೀರಥ –
ರಾಯ ಅಕ್ಷೋಭ್ಯರತನಯ"

"ಮರೆಯದಿರು ಮರೆಯದಿರು
ಮಾರಮಣನೇ
ಗುರುಸತ್ಯಬೋಧಾಯ ವರದ
ರಘುರಾಮ"

ಎಂದು ಸ್ಮರಿಸುವ ಉಕ್ತಿಗಳನ್ನು ನೋಡಿ ದಾಗ ಜಯತೀರ್ಥರು, ಸತ್ಯಬೋಧ ತೀರ್ಥರು, ವಿಜಯದಾಸರು ಮೊದಲಾದ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ.**

ವರ ಜೀವನ ಚಾರಿತ್ರ್ಯಗಳಿಗೆ ಅವರು ಮಾರುಹೋಗಿ ತಮ್ಮ ಜೀವನಕ್ಕೊಂದು ಸ್ಫೂರ್ತಿಯನ್ನು ಪಡೆದಿರುವರೆಂದು ತಿಳಿದು ಬರುತ್ತದೆ. ಇಂತಹವರ ಬದುಕು ಸಾಮಾನ್ಯರ ಬದುಕನ್ನು ಮಂದಾರವಾಗಿಸಿ ಪರಮಾತ್ಮಸಿಗೆ ಬೇಕಾದ ವಸ್ತುವಾಗಿಸಿಬಿಡುತ್ತದೆ. ಸಂಬಂಧದಲ್ಲಿ ಸಾಮೀಪ್ಯದಲ್ಲಿ ಪುಣ್ಯಪುರುಷರ ಜೀವನ ಮೌಲ್ಯಗಳು ಮೇಲೆ ವಿವರಿಸಿದ ರೀತಿಯಲ್ಲಿ ವ್ಯಕ್ತಿ ವಿಕಸನಗೊಳಿಸಿದಂತೆ, ಪರಮಾತ್ಮನ ವಿವಿಧ ಅವತಾರಗಳು, ಸ್ವರೂಪಗಳು ಸಾಧನಾ ಜೀವಿಗೆ ವಿಶಿಷ್ಟವಾದ ಸತ್ವವನ್ನು ನೀಡುತ್ತವೆ ಎಂಬುದನ್ನು ಉಳಿದೆಲ್ಲ ದಾಸಾರ್ಯರು ಕಂಡುಂಡಂತೆ, ವ್ಯಾಸವಿಠಲರೂ ಅನುಭವಿಸಿದ್ದಾರೆ. ಆ ಅನುಭವವನ್ನೂ, ಆ ಅವತಾರಗಳ ವರ್ಣನೆಗಳನ್ನು,

ತಿಳಿಯದೋ ನಿನ್ನಾಟ ।
ತಿರುಪತಿಯ ವೆಂಕಟ ॥ ಪ ॥

ಪೊಳೆವ ನೀರೊಳು ಗೆಲುವ ಮೊರೆಯ।
ನೆಲವ ನೋಡುವ ಸುಳಿವ ಕಂಬದಿ ।
ಇಳೆಯನಳೆಯುವ, ಭಳಿರೆ ಭಾರ್ಗವ ।
ಖಳನ ಛೇದಿಸಿ ಕೊಳಲಧ್ವನಿಗೆ ।
ನಳಿನ ಮುಖಿಯರ ನಾಚಿಸುವ ಬಲು।
ಹಯದಳದ ಬಹು ಹವಣಿಗಾರನೆ ॥ಅ. ಪ॥
( ವೆಂಕಟರಮಣ )

ಇಂದಿರೆ ಮಂದಿರದಲ್ಲಿ ನಿಂದಿರೆ ॥ ಪ ॥

ಇಂದಿರಾದೇವಿ ನಿನ್ನಪಾದ ಪೊಂದಿದೆ
ಸಲಹಬೇಕೆನ್ನ। ಆಹಾ
ಕಂದರ್ಪ ಇಂದ್ರ ಫಣೇಂದ್ರ ಗರುಡ
ಕಂಬು
ಕಂಧರ ಬ್ರಹ್ಮಾದಿ ವಂದ್ಯಳೆ
ಸುಂದರಿ ॥ ಅ. ಪ ॥
( ಲಕ್ಷ್ಮೀದೇವಿ )

ನೆರೆನಂಬಿದೆ ಮತ್ ಹೃದಯಮಂಟಪ–
ದೊಳು
ಪರಿಶೋಭಿಸುತಿರೆ ಪಾಂಡುರಂಗ
( ಪಾಂಡುರಂಗ )

( 27ನೇ ಪುಟ ನೋಡಿ )

# ಭಕ್ತಿಯೋಗ

ಮಾನವನ ಪಾರಮಾರ್ಥಿಕ ಜೀವನ ಪರಿಪೂರ್ಣತೆಗೆ ಭಕ್ತಿಯೊಂದೇ ನಿಜವಾದ ಮಾರ್ಗ. ಇದನ್ನು ಧ್ಯಾನ, ಉಪಾಸನೆ ಎಂದು ಕರೆಯಲಾಗಿದೆ. ಉಪಾಸನವೇ ಮೋಕ್ಷೋಪಾಯ. ಇದು ಜಗತ್ಕಾರಣನಾದ ಪರಮಾತ್ಮನ ವಿಷಯವೇ ಆಗಿರಬೇಕು. ಬರೀ ವಾಕ್ಯಜನ್ಯ ಜ್ಞಾನವಲ್ಲ. ಉಪಾಸನೆಯು ಕೇವಲ ಉಪಾದಿತವಾದರೆ ಕಾರ್ಯಕಾರಿಯಾಗುವುದಿಲ್ಲ. ಭಕ್ತಿಯಾದವರೇನೇ ಪರಮ ಪುರುಷನ ಪ್ರೀತಿಯು ಲಭಿಸಿ ಪ್ರಾಪ್ತ್ಯುಪಾಯವಾಗುವುದು. ಭಕ್ತಿ ರೂಪಾಪನ್ನವಾದುದು ಉಪಾಸನವೇ ವಿನಹ ಕರ್ಮ ಸಮುಚ್ಚಯವಲ್ಲ. ಆದರೆ ಇದಕ್ಕೆ ಅಂಗವಾಗಿ ನಿತ್ಯನೈಮಿತ್ತಿಕಾದಿ ಕರ್ಮ ಅಗತ್ಯ. ಇಂತಹ ಉಪಾಸನೆಯು ಪರಬ್ರಹ್ಮ ವಿಷಯವಾಗಿರಬೇಕೇ ವಿನಹ ದೇವತಾಂತರ ವಿಷಯವಾಗಿರಕೂಡದು.

ಪ್ರಾಚೀನ ವೈದಿಕ ಮತವು ಭಕ್ತಿಯ ಮಹಿಮೆಯನ್ನು ತಿಳಿಸಿದೆ. ಪರಮಾತ್ಮನಲ್ಲಿ ಉತ್ಕಟ ಪ್ರೀತಿ ಇರುವವರಿಗೆ ಸ್ವಾಮಿಯು ತನ್ನ ಸ್ವರೂಪ, ಸ್ವಭಾವಗಳನ್ನು ತಿಳಿಸುವ ಕೃಪೆ ಮಾಡುವನು. ಪರಮಾತ್ಮ ಸಾಕ್ಷಾತ್ಕಾರಕ್ಕೆ ಉತ್ಕಟ ಪ್ರೀತಿಯೇ ಮೂಲಾಧಾರ. ಇಂತಹ ಪ್ರೀತಿಯು ಪ್ರಬಲ ಶಕ್ತಿಯಾಗಿ ಜೀವಾತ್ಮನನ್ನು ಪರಮಾತ್ಮನಲ್ಲಿ ಕೂಡಿಸುವುದು. ಮಾನವನಿಗೆ ಪರಮಾತ್ಮನೇ ಸಾರ ಸರ್ವಸ್ವ. ಆವನೇ ತಾಯಿ, ತಂದೆ, ಭ್ರಾತೃ ಎಲ್ಲವೂ. ಸರ್ವ ಶಕ್ತನಾದ ಪರಮಾತ್ಮನನ್ನು ಚೇತನನು ಅನುಸರಿಸಿ ಗುರಿಮುಟ್ಟಿಸಬೇಕೆಂದು ಅವನನ್ನೇ ಬೇಡಬೇಕು. ಇಂತಹ ಪ್ರಾರ್ಥನೆಯನ್ನು ವೇದವು ತಿಳಿಸುತ್ತದೆ. ಉಪನಿಷತ್ತುಗಳು ಭಕ್ತಿಯ ಮಹಿಮೆಯನ್ನು ಕೊಂಡಾಡಿವೆ. ಇತಿಹಾಸ ಪುರಾಣಗಳು ಭಕ್ತಿ ತತ್ತ್ವದ ಪ್ರಭಾವವನ್ನು ಕೊಂಡಾಡಿವೆ. ದಿವ್ಯ ಸೂರಿಗಳು ಭಕ್ತಿಯ ಮಹಿಮೆಯನ್ನು ತಮ್ಮ ದಿವ್ಯ ಪ್ರಬಂಧಗಳಲ್ಲಿ ಹಾಡಿದ್ದಾರೆ. ಇವು ಸರ್ವೋತ್ತಮ ಭಕ್ತಿಗೀತೆಗಳು. ಪರಮಾತ್ಮ ಸಾಕ್ಷಾತ್ಕಾರದ ಪ್ರತಿಮೆಟ್ಟಿಲನ್ನು ಈ ದಿವ್ಯ ಪ್ರಬಂಧಗಳಲ್ಲಿ ಕಾಣಬಹುದು.

ಮುಕ್ತಿಗೆ ಭಕ್ತಿಯೊಂದೇ ಸಾಧನವೆಂದು ಪೂರ್ವಾಚಾರ್ಯರು ತಿಳಿಸಿ, ಪರಮಾತ್ಮನನ್ನು ಕುರಿತು ಪ್ರಾರ್ಥಿಸಿದ್ದಾರೆ.

“ಸ್ವಧರ್ಮ ಜ್ಞಾನ ವೈರಾಗ್ಯ ಸಾಧ್ಯ ಭಕ್ತ್ಯೈಕ ಗೋಚರಃ” ಎಂದು ಯಾಮುನ ಮುನಿಗಳು ಗೀತಾರ್ಥ ಸಂಗ್ರಹದಲ್ಲಿ ಹೇಳಿದ್ದಾರೆ. ಹಾಗೆಯೇ “ಉಭಯ ಪರಿಕರ್ಮಿತ ಸ್ವಾಂತಸ್ಯ ಏಕಾಂತಿಕಾತ್ಯಂತಿಕ ಭಕ್ತಿಯೋಗ ಲಭ್ಯಃ” ಎಂದು ಸಿದ್ಧಿತ್ರಯದಲ್ಲಿ ತಿಳಿಸಿದ್ದಾರೆ. ಸ್ತೋತ್ರ ರತ್ನದಲ್ಲಿ “ಭಗವನ್! ಭಕ್ತಿಮಪಿ ಪ್ರಯಚ್ಛ ಮೇ” ಎಂದಿದ್ದಾರೆ.

ಯಾಮುನ ಮುನಿಗಳ ಉಪದೇಶದಿಂದ ಪ್ರೇರಿತರಾದ ಭಗವಾನ್ ರಾಮಾನುಜರು ತಮ್ಮ ಗ್ರಂಥಗಳಲ್ಲಿ ಭಕ್ತಿಯೋಗದ ಮಹಿಮೆಯನ್ನು ವಿವರಿಸಿದ್ದಾರೆ. ರಾಮಾನುಜ ಸಿದ್ಧಾಂತವನ್ನು ಪರಿಷ್ಕರಿಸಿ ಪರಿಪೋಷಿಸಿ ಪ್ರಕಾಶ ಪಡಿಸಿರುವ ವೇದಾಂತ ದೇಶಿಕರು ತಮ್ಮ ಗ್ರಂಥಗಳಲ್ಲಿ ಭಕ್ತಿಗೆ ಪ್ರಧಾನವಾದ ಸ್ಥಾನವನ್ನು ಕೊಟ್ಟು, ಅದ್ಭುತ ರೀತಿಯಲ್ಲಿ ವಿವರಿಸಿದ್ದಾರೆ.

ಶ್ರೀಕೃಷ್ಣ ಪರಮಾತ್ಮನು ಭಕ್ತಿಯೋಗದ ಅರ್ಥ ವಿವರಣೆಯನ್ನು “ಪ್ರೀತಿರೂಪಮನು ಧ್ಯಾನಂ ಭಕ್ತಿರಿತ್ಯಭಿಧೀಯತೇ” ಎಂದು ತಿಳಿಸಿದ್ದಾನೆ. ಭಕ್ತಿಯು ಪ್ರೀತಿಯ ವಿಶೇಷರೂಪ. ತೈಲಧಾರೆಯಂತೆ ಅವಿಚ್ಛಿನ್ನ. ಸಂತತಿ ನಿರತಿಶಯ ಪ್ರೀತಿ ಇದು. ಉಪಾಸನಾ ರೂಪವಾದುದು ಪರಮಾತ್ಮ ಸಾಕ್ಷಾತ್ಕಾರವನ್ನು ಪರಬ್ರಹ್ಮ ಸ್ವರೂಪವನ್ನು ಅಪೇಕ್ಷಿಸುತ್ತದೆ. ಪರಮಾತ್ಮನನ್ನು ಉದ್ದೇಶಿಸಿ ಮಾಡಬೇಕಾದ ಅವನ ಆಜ್ಞಾ ಕೈಂಕರ್ಯಗಳಾದ ಸಂಧ್ಯಾ ವಂದನ, ಬ್ರಹ್ಮಯಜ್ಞ, ಭಗವದಾರಾಧನ, ವೈಶ್ವದೇವ, ಮುಂತಾದ ಪಂಚ ಮಹಾಯಜ್ಞಗಳನ್ನು ಮಾಡಲೇ ಬೇಕು. ಅನಂತರ ಪರಮಾತ್ಮನ ಧ್ಯಾನದಲ್ಲಿ ನಿರತನಾಗಬೇಕು.

ಉಪಾಸನದ ಸ್ವರೂಪ ಹೇಗೆಂದರೆ ಮನಸ್ಸನ್ನು ಪರಮಾತ್ಮನಲ್ಲಿಡಬೇಕು. ಪರಮಾತ್ಮನು ಶುಭಾಶ್ರಯನು, ಸರ್ವವನ್ನೂ ಧರಿಸುವವನು, ಸರ್ವವನ್ನೂ ಭರಿಸುವವನು ಉಪಾಸ್ಯನು, ನಿಖಿಲ ಹೇಯಪ್ರತ್ಯನೀಕ ಕಲ್ಯಾಣ ಗುಣಾಕರನು, ಸರ್ವಜ್ಞನು, ಸತ್ಯ ಸಂಕಲ್ಪನು, ಶಂಖ ಚಕ್ರಗದಾಶಾರ್ಙಾದಿ ದಿವ್ಯಾಯುಧ, ದಿವ್ಯ ಭೂಷಣಗಳಿಂದ ಕೂಡಿದ ದಿವ್ಯ ಮಂಗಳ ವಿಗ್ರಹನು. ಈ ದಿವ್ಯಮಂಗಳ ವಿಗ್ರಹವು ಪುಂಡರೀಕದ ಹಾಗೆ ಪರಿಶುದ್ಧವಾದ, ವಿಶಾಲವಾದ ಕಣ್ಣುಗಳಿಂದ “ಯಥಾಕಪ್ಯಾಸಂ ಪುಂಡರೀಕಮೇವಾಕ್ಷಿಣೀ” ಎಂಬಂತೆ. ಈ ಶ್ರುತಿವಾಕ್ಯಕ್ಕೆ ರಾಮಾನುಜರು “ಗಂಭೀರಾಂಭಃಸಮುದ್ಭೂತ ಸುಮೃಷ್ಟ ನಾಳ ರವಿಕರ ವಿಕಸಿತ ಪುಂಡರೀಕ ದಳಾಮಲಾಯತೇಕ್ಷಣಃ” ಎಂದು ವೇದಾರ್ಥ ಸಂಗ್ರಹದಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

“ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖಗದಾರ್ಯುದಾಯುಧಂ
ಶ್ರೀವತ್ಸ ಲಕ್ಷ್ಮಂ ಗಳಶೋಭಿ ಕೌಸ್ತುಭಂ
ಪೀತಾಂಬರಂ ಸಾಂದ್ರ ಪಯೋಧಿ ಸೌಭಗಂ
ಮಹಾರ್ಹ ವೈಡೂರ್ಯ ಕೋಟಿಕುಂಡಲತ್ವಿಷಾ
ಪರಿಷ್ವಕ್ತ, ಸಹಸ್ರ ಕುಂಡಲಮುದ್ದಾಮ
ಕಾಂಚ್ಯಂಗದ ಕಂಕಣಾದಿಭಿಃ ವಿರೋಚ
ಮಾನಂ ವಸುದೇವ ಐಕ್ಷತ”

ವಸುದೇವನಿಗೆ ತೋರಿಸಿದ ಪರಮಾತ್ಮನ ದಿವ್ಯಮಂಗಳ ವಿಗ್ರಹವನ್ನು ಸಾಮಾನ್ಯವಾಗಿ ಪರರೂಪ ಎಂದು ತಿಳಿಸಲಾಗಿದೆ. ಇಂತಹ ದಿವ್ಯ ಮಂಗಳ ವಿಗ್ರಹರೂಪ ಪರಿಪೂರ್ಣ ಪರಬ್ರಹ್ಮನೇ ಉಪಾಸ್ಯನಾಗಬೇಕು. ಇಂತಹ ಅವಿಚ್ಛಿನ್ನ ಸ್ಮೃತಿ ಸಂತಾನರೂಪ ಭಕ್ತಿ ಇದ್ದರೆ “ಮದ್ಭಕ್ತೋ ಭವ” ಎಂದು ಪರಮಾತ್ಮನು ಸಂತುಷ್ಟನಾಗಿ ಭಕ್ತನನ್ನಾಗಿ ಭಾವಿಸುವನು.

ಯಾವಾಗ ಚೇತನನಿಗೆ ತೈಲಧಾರೆಯ ಹಾಗೆ ಅವಿಚ್ಛಿನ್ನ ಸ್ಮೃತಿ ಸಂತಾನರೂಪ ಪ್ರೀತ್ಯತಿಶಯ ಉಂಟಾಗುವುದೋ ಆಗ ಅವನ ಪಂಚ ಮಹಾಯಜ್ಞ, ಭಗವದರ್ಚನ ಕಥಾಶ್ರವಣ, ಸಂಪೂರ್ಣ ಧ್ಯಾನ ಅರ್ಘ್ಯ ಪಾದ್ಯಾಚಮನ ಕೈಂಕರ್ಯವು ಪರಮಾತ್ಮನ ಪ್ರೀತಿ ಸಂಪಾದನೆಗಾಗಿ ನಮಸ್ಕಾರದಲ್ಲಿ ಅಂತ್ಯವಾಗಬೇಕು. ಏಕೆಂದರೆ ನಮಸ್ಕಾರವು ಸಹಜ ಶೇಷ ಭಾವದ ಪರಾಕಾಷ್ಠೆ, ಆದರಿಂದ ಉಂಟಾಗುವ ಆನಂದವು ಅತಿಶಯವಾದುದು, ಇದೇ ಭಕ್ತಿಯೋಗ.

ಭಕ್ತಿಯೋಗದ ಮಹಾತ್ಮೆಯನ್ನು ಕುಲಶೇಖರ ಆಳ್ವಾರರು “ಹೇ ಮನಸ್ಸೇ ಸಂಸಾರಸಾಗರವು ಅಗಾಧವಾಗಿ ದಾಟಲಶಕ್ಯವಾದುದು. ಆದರೆ ಅದನ್ನು ದಾಟುವುದು ಹೇಗೆ ಎಂದು ನೀನು ಕಾತರ ಪಡಬೇಡ. ದೇವನಾಗಿ, ಸರಸಿಜಾಕ್ಷನಾಗಿ ನರಕಾಸುರನನ್ನು ಮರ್ದನಮಾಡಿದ ಶ್ರೀ ಕೃಷ್ಣ ಪರಮಾತ್ಮನಲ್ಲಿಟ್ಟ ಭಕ್ತಿಯು ನೀನು ಖಂಡಿತ ದಾಟುವಂತೆ ಮಾಡುವುದು. ಹೇ! ಸ್ವಾಮಿಯೇ! ಅಂತಹ ಮಹತ್ತಾದ ಸಂಸಾರ ಸಮುದ್ರದಲ್ಲಿ ಮುಳುಗಿರುವವರಿಗೆ “ಭಕ್ತಿ” ಎಂಬ ನಾವೆಯನ್ನು ಕೊಡು, ಈ ಸಮುದ್ರವು ಎಂಥಾದ್ದೆಂದರೆ, ಆಸೆ ಎಂಬ ನೀರನ್ನುಳ್ಳದ್ದು. ಸಮುದ್ರಕ್ಕೆ ಎಷ್ಟು ನೀರು ಹೋದರೂ ಅದು ಹೇಗೆ ತುಂಬದೆ ತೃಪ್ತಿ ಹೊಂದುವುದಿಲ್ಲವೋ ಹಾಗೆ ಸಂಸಾರದಲ್ಲಿ ಆಸೆಗೆ ಕೊನೆ ಮೊದಲೇ ಇಲ್ಲ. ಕಾಮವೆಂಬ ತರಂಗವುಳ್ಳದ್ದು ಸಂಸಾರ ಪತ್ನಿಯೇ ಆ ಸಮುದ್ರದ ಸುಳಿ, ಪುತ್ರ ಮಿತ್ರ ಸಹೋದರರೂ ಮೊಸಳೆಗಳ ಗುಂಪು–ಹೀಗೆ ಸಂಸಾರವು ಮೃತ್ಯರೂಪವಾದುದು

**ಶ್ರೀ ಡಿ. ಕೃಷ್ಣಯ್ಯಂಗಾರ್**

ಆದುದರಿಂದ "ಭಕ್ತಿ" ಎಂಬ ನಾವೆಯನ್ನು ಕೊಟ್ಟು ಮುಳುಗಿ ಹೋಗುವರನ್ನು ಕಾಪಾಡು ದೇವ! ಎಂದಿದ್ದಾರೆ. ಸಾಧ್ಯೋಪಾಯರೂಪವಾದ ಭಕ್ತಿಯು ನಾವೆಯ ಮೂಲಕ ಮುಳುಗಿರುವ ಚೇತನನನ್ನು ದಾಟಿಸುವವನು ಸರ್ವೋಪಾಯ ನಾದ ಪರಮಾತ್ಮನು.

ಭಕ್ತಿಯೋಗದ ಲಕ್ಷಣವನ್ನು ಭಗವದ್ರಾಮಾನುಜಾಚಾರ್ಯರು ಗೀತಾಭಾಷ್ಯದಲ್ಲಿ ಬಹು ಆಶ್ಚರ್ಯಕರರೀತಿಯಲ್ಲಿ ವಿವರಿಸಿದ್ದಾರೆ. "ಶರೀರ ಧಾರಣೆಗೆ ಉಪಯುಕ್ತಗಳಾದ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ನನ್ನ ಪ್ರೀತಿಗಾಗಿ ಮಾಡು, ಯಾವಾಗಲೂ ನನ್ನ ಸ್ತೋತ್ರಮಾಡು, ಪರಮ ಭಕ್ತಿಯಿಂದ ನನಗೆ ನಮಸ್ಕಾರಮಾಡು. ಜಗತ್ತು ನನಗೆ ವಿಭೂತಿಯಾಗಿ ನನ್ನ ನಿಯಮಕ್ಕೆ ಒಳಪಟ್ಟಿದೆ ಎಂದು ತಿಳಿ, ತೈಲಧಾರೆಯ ಹಾಗೆ ನಿರತಿಶಯ ಪ್ರೀತಿ ಮತ್ತು ಚಿಂತನೆಯಿಂದ ಅನುಸಂಧಾನ ಮಾಡಿ ಪ್ರತಿನಿತ್ಯವೂ ಶಾಸ್ತ್ರ ನಿಯಮ ಪ್ರಕಾರ ಆಚರಿಸಿದರೆ ಇಂತಹ ಉಪಾಸನದಿಂದ ನಿನಗೆ ಯೋಗನಿಷ್ಪತ್ತಿಯುಂಟಾಗಿ ನೀನು ನನ್ನನ್ನೇ ಹೊಂದುವೆ.

ಮನ್ಮನಾ ಭವ ಮದ್ಭಕ್ತೋ
ಮದ್ಯಾಜೀ ಮಾಂ ನಮಸ್ಕುರು ।
ಮಾಮೇ ವೈಷ್ಯಸಿ ಯುಕ್ತ್ವೈವ
ಮಾತ್ಮಾನಂ ಮತ್ಪರಾಯಣಃ ॥

ಎಂದು ಗೀತಾಚಾರ್ಯನೂ ಉಪದೇಶ ಮಾಡಿದ್ದಾನೆ.

ಭಕ್ತನು ನಿಷ್ಕಾಮಕರ್ಮಮಾಡಿ ಎಲ್ಲವನ್ನೂ ಪರಮಾತ್ಮನಿಗರ್ಪಿಸುವನು. ತಾನು ಸಂಪೂರ್ಣ ಪರತಂತ್ರನೆಂದೂ ಪರಮಾತ್ಮನೇ ಅವನ ತೃಪ್ತಿಗಾಗಿ ತನ್ನ ಕೈಯ್ಯಲ್ಲಿ ಕರ್ಮಮಾಡಿಸುವನೆಂದೂ ತಿಳಿಯುವನು. ತಾನು ಮಾಡುವುದೇ ಪರಮಾತ್ಮನ ಪ್ರೀತಿಗಾಗಿ, ಅವನ ಸೇವೆಗಾಗಿ ಎಂದು ಭಾವಿಸುವನು. ಜಗತ್ತಿನ ಚೇತನಾಚೇತನಗಳಲ್ಲಿ ಅಂತರ್ಗತನಾಗಿರುವ ಪರಮಾತ್ಮನಲ್ಲಿ ತಾನು ವಿನೀತಭಾವದಿಂದ ವರ್ತಿಸಬೇಕೆಂದು ನಿಶ್ಚಯಿಸುವನು. ಪರಮಾತ್ಮನ ಧ್ಯಾನ, ಸಂಕೀರ್ತನಗಳಲ್ಲಿ ತೊಡಗುವುದರಿಂದ ತಾನು ಅವನನ್ನು ಅಗಲಿ ಇರಲಾರೆನೆಂಬ ಉತ್ಕಟ ಇಚ್ಛೆ ಉಂಟಾಗುವುದು. ತನ್ನನ್ನು ತಾನೇ ಮರೆತು ಸ್ವಾಮಿಯ ದಿವ್ಯ ಚೇಷ್ಟಿತಗಳಲ್ಲಿ ಆಸಕ್ತಿಯುಂಟಾಗುವುದು. ತನಗೆ ಅತ್ಯಂತ ಪ್ರೀತಿಯುತವಾದ ಸ್ವಾಮಿಯ ಸೇವಾ ಕೈಂಕರ್ಯಗಳಾದ, ದೇವಾಲಯ ನಿರ್ಮಾಣ, ಸಂಮಾರ್ಜನ, ತಿರುಮಾಲೆ, ತಿರುವಳಕ್ಕು ಮುಂತಾದ ಸೇವೆಗಳಲ್ಲಿ ತೊಡಗುವನು. ಪರಮಾತ್ಮನ ಅನಂತ ಕಲ್ಯಾಣ ಗುಣಗಳಲ್ಲಿ ನೆಟ್ಟ ಮನಸ್ಸುಳ್ಳವನಾಗಿ ತನ್ನನ್ನು ತಾನೇ ಮರೆತು ಸ್ವಾಮಿಯ ಮೇಲಿನ ಅಮಲಿನಲ್ಲಿ ಕಾಲ ಕಳೆಯುವನು. ಹೀಗೆ ಜಗತ್ತೆಲ್ಲವೂ ಸ್ವಾಮಿಗೆ ಪರತಂತ್ರ ಎಂದು ತಿಳಿಯುವನು. ಇದೆಲ್ಲ ಭಕ್ತಿಯೋಗಿಯ ಲಕ್ಷಣಗಳು.

ಯಾರು ಪರಮಾತ್ಮನನ್ನು ಪ್ರೀತಿಸುವರೋ ಅವರನ್ನು ಪರಮಾತ್ಮನು ಪ್ರೀತಿಸುವನು. ಇದೇ ಭಕ್ತಿ. ಇದನ್ನು ಗೀತಾಭಾಷ್ಯದಲ್ಲಿ ಹೀಗೆ ವಿವರಿಸಲಾಗಿದೆ. ಪರಮಾತ್ಮನ ದಿವ್ಯ ವೈಕುಂಠ ಪ್ರಾಪ್ತಿಗೆ ಯೋಗ್ಯವೆಂದು ಪರಿಗ್ರಹಿಸುವುದಕ್ಕೆ ಕಾರಣವಾದ ಸ್ಮೃತಿ ಸಂತಾನರೂಪ ಧ್ಯಾನಕ್ಕೆ ವಿಷಯವಾದ ಸ್ವಾಮಿಯ ದಿವ್ಯ ಮಂಗಳ ವಿಗ್ರಹವು ಪ್ರಿಯತಮವಾದುದರಿಂದ, ಅಂತಹ ಧ್ಯಾನನೇ ಭಕ್ತಿ. ಪರಮ ಪುರುಷನು ತನಗೆ ಇಷ್ಟಬಂದವನನ್ನು ತನ್ನ ಇಚ್ಛಾ ಮಾತ್ರದಿಂದ ಮೋಕ್ಷಸ್ಥಾನಕ್ಕೆ ಕರೆದುಕೊಳ್ಳುವುದಿಲ್ಲ. ಹಾಗೆ ಮಾಡಿದರೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳಿಗೆ ಗುರಿಯಾಗಬೇಕಾಗುವುದು. ಆದುದರಿಂದ ಪರಮಾತ್ಮನು ತನ್ನ ವರಣೀಯತೆಯನ್ನು ಪ್ರಪನ್ನನಲ್ಲಿ ಕಂಡುಬರುವ ವಿಶೇಷಗುಣಕ್ಕಧೀನವಾಗಿ ವಿಧಿಸುವನು. ಇಂತಹ ವರಣೀಯತೆಗೆ ಕಾರಣ ಭಕ್ತಿ. ಇಂತಹ ಭಕ್ತಿಯಿಂದ ಯಾವನು ಪರಮಾತ್ಮನಿಗೆ ಪ್ರಿಯತಮನಾಗುವನೋ ಅಂತಹವನನ್ನು ಸ್ವಾಮಿಯು ಮೋಕ್ಷಕ್ಕೆ ಯೋಗ್ಯನನ್ನಾಗಿ ಮಾಡುವನು.

"ಸ್ನೇಹಪೂರ್ವಮನುಧ್ಯಾನಂ ಭಕ್ತಿರಿತ್ಯಭಿಧೀಯತೇ । ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನುವರ್ತಿನಾಂ ತ್ವಾಮನುಸ್ಮರತಸ್ಸಾಮಾ ಹೃದಯಾನ್ಮಾಪಸರ್ಪತು".

ಇತ್ಯಾದಿ ಪ್ರಮಾಣ ವಚನಗಳಿಂದ ವ್ಯಕ್ತವಾಗುವ ಉಪಾಸನ, ಅನುಷ್ಠಾನವೇ ಭಕ್ತಿಯೆನ್ನಿಸಿಕೊಳ್ಳುವುದು.

ನಾಥ ಯೋನಿಸಹಸ್ರೇಷು ಯೇಷು ಯೇಷು ವ್ರಜಾಮ್ಯಹಂ। ತೇಷು ತೇಷ್ವಚ್ಯುತಾ ಭಕ್ತಿರಚ್ಯುತಾಸ್ತು ಸದಾ ತ್ವಯಿ ॥

ಕ್ವ ನಾಕಪೃಷ್ಠಗಮನಂ ಪುನರಾವರ್ತಿಲಕ್ಷಣಂ। ಕ್ವಜಪೋ ವಾಸುದೇವೇತಿ ಮುಕ್ತಿ ಬೀಜನುಮತ್ತಮಂ ॥

ಇತ್ಯಾದಿ ವಿಷ್ಣುಪುರಾಣ ವಚನಗಳೂ ಇವೆ.

ಭಕ್ತಿಯನ್ನು ಸಾಧಿಸಬೇಕಾದರೆ ಕೆಲವು ನಿಯಮಗಳನ್ನು ಅನುಸರಿಸಬೇಕು. ಇವನ್ನು ಸಾಧನ ಸಪ್ತಕ ಎಂದು ಕರೆಯಲಾಗಿದೆ. ಅವು ಯಾವುವೆಂದರೆ: ವಿವೇಕ, ವಿಮೋಕ, ಅಭ್ಯಾಸ, ಕ್ರಿಯೆ, ಕಲ್ಯಾಣ, ಅನವಸಾದ ಮತ್ತು ಅನುದ್ಧರ್ಷ. ಭಕ್ತಿಯೋಗಕ್ಕೆ ಮೊದಲು ವಿವೇಕ ಅಥವಾ ವಿವೇಚನಾಶಕ್ತಿ ಅಗತ್ಯ. ಇದು ಕಾಯಶುದ್ಧಿ, ಇದರಿಂದ ನಿರ್ಮಲವಾದ ಮನಸ್ಸುಂಟಾಗುವುದು. ಆಹಾರ ಶುದ್ಧಿ ಇರಬೇಕು.

ಕಾಮ ಕ್ರೋಧಗಳಿಂದ ದೂರವಾಗಿರುವುದು ವಿಮೋಕ. ಪರಮಾತ್ಮ ಸಾಕ್ಷಾತ್ಕಾರಕ್ಕೆ ಇದು ಮುಖ್ಯವಾದುದು. ಯಾವಾಗ ಭಕ್ತನಿಗೆ ಕಾಮ ಕ್ರೋಧಗಳಿರುವುದಿಲ್ಲವೋ ಆಗ ಅವನಿಗೆ ಮನಶ್ಶಾಂತಿ ಉಂಟಾಗುವುದು.

"ಆರಂಭಣಂ ಸುಶೀಲನಂ ಪುನಃ ಪುನಃ ಅಭ್ಯಾಸ ಇತಿ" ಎಂದು ಅಭ್ಯಾಸಪದದ ಅರ್ಥ. ಪರಮಾತ್ಮನ ಸತತ ಚಿಂತನೆ ಭಕ್ತನಿಗಿರಬೇಕು. ಇದನ್ನು ಧ್ರುವಾನುಸ್ಮೃತಿ ಎಂದು ಕರೆಯಲಾಗಿದೆ. ಇದೇ ಧ್ಯಾನಯೋಗ. ಯಾವಾಗ ಇಂತಹ ಪರಮಾತ್ಮನ ಸತತ ಧ್ಯಾನ ಯಶಸ್ವಿಯಾಗುವುದೋ ಆಗ ಪರಮಾತ್ಮಸಾನ್ನಿಧ್ಯ ದೊರೆಯುವುದು. "ಸದಾ ತದ್ಭಾವ ಭಾವಿತಾಃ" ಎಂದು ಗೀತೆಯು ತಿಳಿಸುತ್ತದೆ.

ಕ್ರಿಯಾ ಎಂದರೆ ಶಕ್ತಿಗನುಸಾರವಾಗಿ ಪಂಚ ಕರ್ತವ್ಯಗಳನ್ನು ನಿರ್ವಹಿಸುವುದು. ಇಂತಹ ಕ್ರಿಯಾನಿಷ್ಠೆ ಧ್ಯಾನಶಕ್ತಿಯನ್ನು ಬಲಗೊಳಿಸುವುದು. ಪಂಚ ಕರ್ತವ್ಯಗಳನ್ನು ಬೃಹದಾರಣ್ಯಕ ಉಪನಿಷತ್ತು ತಿಳಿಸುವುದು.

"ತಮೇವ ತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ, ಯಜ್ಞೇನ ದಾನೇನ ತಪಸಾ ನಾಶಕೇನ"

ವೇದಾಧ್ಯಯನ, ಯಜ್ಞ, ದಾನ, ತಪಸ್ಸು, ಮತ್ತು ದಯಾಪರತೆ ಇಂತಹ ಪಂಚಮಹಾ ಯಜ್ಞಗಳಿಂದ ಪರಿಶುದ್ಧಾತ್ಮವು ಬರುವುದು.

ಕಲ್ಯಾಣ ಎಂದರೆ ಗುಣವಂತನಾಗಿರುವುದು. ಇಲ್ಲಿ ಬಾಹ್ಯ ಶುದ್ಧಿಗಿಂತ ಅಂತಶ್ಶುದ್ಧಿ ಅಗತ್ಯ. ಪರಿಶುದ್ಧ ದೇಹವಿರಬಹುದು. ಆದರೆ ಅಂತಶ್ಶುದ್ಧಿ ಇರಬೇಕು. ಇಂತಹ ಕಲ್ಯಾಣಕ್ಕೆ ಆರು ಗುಣಗಳಿರಬೇಕೆಂದು ಭಗವದ್ರಾಮಾನುಜರು ತಿಳಿಸುತ್ತಾರೆ.

"ಸತ್ಯಾರ್ಜವದಯಾದಾನ ಹಿಂಸಾನಭಿಧ್ಯಾಃ ಕಲ್ಯಾಣಾನಿ" ಸರ್ವಭೂತಹಿತವೇ ಸತ್ಯ. ಕಾಯಾ ವಾಚಾ ಮನಸಾ ನಿರ್ವಂಚನೆಯಿಂದಿರುವುದು ಆರ್ಜವ. ಇತರರ ದುಃಖವನ್ನು ಸಹಿಸದೇ ಇರುವುದು ದಯಾ. "ಸ್ವಾರ್ಥನಿರಪೇಕ್ಷ ಪರ ದುಃಖ ಸಹಿಷ್ಣುತ್ವಂ". ಹಿಂಸೆ ಮಾಡದಿರುವುದು ಅಹಿಂಸೆ, ಇದನ್ನು "ಕರಣತ್ರಯ ಪರಪೀಡಾ ನಿವೃತ್ತಿಃ" ಎಂದು ಅರ್ಥಮಾಡಲಾಗಿದೆ. ಭಕ್ತನು ಅಸೂಯೆಯನ್ನು ದೂರಮಾಡಬೇಕು. ಇದು

(24 ನೇ ಪುಟ ನೋಡಿ)




1892 ನೇ ಸೆಪ್ಟೆಂಬರ್ 11 ಸೋಮವಾರ. ಅಮೆರಿಕಾದ ಚಿಕಾಗೋ ನಗರದಲ್ಲಿ ವಿಶ್ವಧರ್ಮ ಸಮ್ಮೇಳನಕ್ಕೆ ವಿಶ್ವದ ಎಲ್ಲಾ ಧರ್ಮದ ಪ್ರತಿನಿಧಿಗಳು ಬಂದು ಅವರವರ ಧರ್ಮದ ಹಿರಿಮೆಯನ್ನು ಹೊಗಳುವುದೇ ಮುಖ್ಯ ಧ್ಯೇಯವನ್ನಾಗಿಸಿಕೊಂಡಿದ್ದರು. ಆದರೆ ಕಷಾಯ ವಸ್ತ್ರಧಾರಿ ತೇಜಃಪುಂಜ ಭವ್ಯಾಕೃತಿಯ ಒಬ್ಬ ಯುವಕ ಮೌನವಾಗಿ ಕುಳಿತಿದ್ದರು. ಸಭಾಧ್ಯಕ್ಷರು ಭಾಷಣ ಮಾಡಲು ವಿನಂತಿಸಿಕೊಂಡರೂ ಕಡೆಯವರೆಗೆ ಸುಮ್ಮನೆ ಕುಳಿತಿದ್ದು ಎಲ್ಲರ ಭಾಷಣಗಳೂ ಮುಗಿದ ಮೇಲೆ ಎದ್ದು ನಿಂತು "ಸೋದರ ಸೋದರಿಯರೆ" ಎಂದು ಭಾಷಣ ಪ್ರಾರಂಭಿಸುತ್ತಲೇ, ಅದುವರೆವಿಗೆ ನೀರಸವಾಗಿ ಸಭಾಮರ್ಯಾದೆಗಾಗಿ ಕುಳಿತುಕೇಳುವ ಶಿಕ್ಷೆಗೆ ಒಳಪಟ್ಟಿದ್ದ ಸಭಾಸದರು ಒಮ್ಮೆಗೇ ಆ ಯುವಕನ ಭಾಷಣದ ಪ್ರಥಮಪದಗಳು 'ಸೋದರ ಸೋದರಿಯರೆ' ಎನ್ನುವ ವಿದ್ಯುತ್ ಸ್ಫುರಿ ಮೈಯ್ಯಲ್ಲಿ ಹರಿದಂತಾಗಿ ಪುಳಕಗೊಂಡು ಮುಂದೆ ಆ ಯುವಕನ ಭಾಷಣದಲ್ಲಿ ಕೇಳ ಬಹುದಾದ ಸಿಡಿಲಿನಂತಹ ವಾಗ್ಧಾರೆಗೆ ಮುನ್ಸೂಚನೆಯಂತೆ ತಟ್ಟಿದ ಚಪ್ಪಾಳೆ ನಭದ ಗುಡುಗನ್ನು ನೆನಪಿಗೆ ತರುವಂತಿತ್ತು. ಭಾಷಣ ಮುಂದುವರಿಸುತ್ತ, ಭಾರತೀಯರ ಹಿಂದೂ ಧರ್ಮ, ಅದರ ಹಿರಿಮೆ ಮಹತ್ವಗಳನ್ನು ವಿವರಿಸಿ, ಹಿಂದೂ ಧರ್ಮ ಹೇಗೆ ಸರ್ವ ಧರ್ಮ ಸಮನ್ವಯದಿಂದ ಕೂಡಿದೆ ಎಂಬುದನ್ನು ವಿವರಿಸಿ, ಪ್ರಪಂಚದ ನಾನಾ ಭಾಗಗಳಿಂದ ಬಂದಿದ್ದ ನಾನಾ ಧರ್ಮಗಳ ಪ್ರತಿನಿಧಿಗಳ ಧರ್ಮಾಂಧತೆಯ ಪೊರೆಯನ್ನು ತಮ್ಮ ಜ್ಞಾನ ಖಡ್ಗದಿಂದ ಖಂಡಿಸುತ್ತಿರಲು ಅಧ್ಯಾತ್ಮವೇ ಮೂರ್ತಿವೆತ್ತಂತೆ ನಿಂತು ಸಾಮವೇದ ಘೋಷದಂತೆ ಮೊಳಗುತ್ತಿರುವ ಅವರ ವಾಗ್ಧಾರೆಗೆ ಮುಗ್ಧರಾದ ಸಭಾಸದರು ತಮ್ಮ ಇರುವಿಕೆಯನ್ನು ಮರೆತು ಕೇಳುತ್ತಿದ್ದರು. ಭಾಷಣ ಅಂತಿಮ ಘಟ್ಟವನ್ನು ತಲುಪಿ ಸಭೆಗೆ ವಂದಿಸಿ ಮುಗಿಸಿದಾಗ, ಯಾವುದೋ ಆನಂದದ ಹೊಳೆಯಲ್ಲಿ ಮೀಯುತ್ತಿದ್ದವರನ್ನು ಈಚೆಗೆ ಎಳೆದು ತಂದಂತಾದ ಸಭಿಕರು ಆನಂದಾಶ್ರು ಪೂರ್ಣ ನಯನರಾಗಿ ಹಲವು ನಿಮಿಷಗಳವರೆಗೆ ನಿಲ್ಲಿಸದೆ ಚಪ್ಪಾಳೆ ತಟ್ಟಿ ತಮ್ಮ ಆನಂದವನ್ನು ವ್ಯಕ್ತಪಡಿಸಿದರು.

ಜಗತ್ತಿನ ಎಲ್ಲ ಧರ್ಮಗಳ ಮೇಲೂ ದಿಗ್ವಿಜಯವನ್ನು ಸಾಧಿಸಿ ಅಧ್ಯಾತ್ಮ ಚಕ್ರವರ್ತಿ ಎನ್ನಿಸಿಕೊಂಡ ಆ ದಿವ್ಯಮೂರ್ತಿ, ಗೈರಿಕ ವಸನಧಾರಿ ಭಾರತಾಂಬೆಯ ಮುದ್ದಿನಮಗ, ರಾಮಕೃಷ್ಣ ಪರಮ ಹಂಸರ ಪ್ರಾಣ ಶಿಷ್ಯ ಸ್ವಾಮಿ ವಿವೇಕಾನಂದ.

ಭಾರತ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆಯಬಹುದಾದ ಐತಿಹಾಸಿಕ ಘಟನೆಗಳಿಗೆ, ಮಹಾಪುರುಷರ ಜನನಕ್ಕೆ ವಂಗಭೂಮಿಯ ಕೊಡುಗೆ ಅಪಾರ. ರಾಜಾರಾಮ ಮೋಹನ ರಾಯ್, ನೋಬೆಲ್ ಪಾರಿತೋಷಕ ವಿಜೇತ ರವೀಂದ್ರನಾಥಠಾಕೂರ್, ರಾಮಕೃಷ್ಣ ಪರಮ ಹಂಸ, ಸ್ವಾಮಿ ವಿವೇಕಾನಂದ, ಸುಭಾಸ್ ಚಂದ್ರಬೋಸ್ ಮುಂತಾದ ಅನೇಕ ಭಕ್ತರ ವಿಜ್ಞಾನಿಗಳ, ಕವಿಗಳ, ದೇಶ ಭಕ್ತರ, ಸಮಾಜ ಸುಧಾರಕರ ತವರೂರು ಬಂಗಾಳ.

ಬಂಗಾಳದ ಕಲ್ಕತ್ತೆಯಲ್ಲಿ ಕಾಯಸ್ಥಕ್ಷತ್ರಿಯ ಕುಲಕ್ಕೆ ಸೇರಿದ ವೃತ್ತಿಯಲ್ಲಿ ವಕೀಲರಾಗಿದ್ದ ವಿಶ್ವನಾಥ ದತ್ತರು ಇಡೀ ಕಲ್ಕತ್ತ ನಗರಕ್ಕೆ ಚಿರಪರಿಚಿತರಾಗಿದ್ದರು. ಕಾರಣ ಅವರು ದೀನರ, ಬಡವರ ಬಂಧುವಾಗಿ, ಪ್ರಜಾ ಸೇವಕರಾಗಿದ್ದುದೇ. ಅವರಲ್ಲಿ ದೇಹಿ ಎಂದು ಬಂದ ಯಾರೂ ಶೂನ್ಯ ಹಸ್ತರಾಗಿ ಹಿಂದಿರುಗಿದ್ದುದೇ ಇಲ್ಲ. ಇವರ ಉದಾರತೆಗೂ ಕಾರಣವಿಲ್ಲದಿಲ್ಲ. ವಿಶ್ವನಾಥ ದತ್ತರ ತಂದೆ ದುರ್ಗಾ ಚರಣದತ್ತರು ಸತ್ಯಾನ್ವೇಷಣೆಗಾಗಿ ಗೃಹತ್ಯಾಗ ಮಾಡಿ ಸಂನ್ಯಾಸಿಯಾಗಿದ್ದರು. ಅಂದಿನಿಂದ ಶೋಕತಪ್ತಳಾದ ತಾಯ ಮಡಿಲಲ್ಲಿ ಬೆಳೆದ ವಿಶ್ವನಾಥದತ್ತರು ನೋವಿನ ಅರ್ಥ ತಿಳಿದವರಾದ್ದರಿಂದ ನೊಂದ ಜೀವಿಗಳಿಗೆ ನೆರವಾಗುವುದೇ ಜೀವನ ಧ್ಯೇಯವನ್ನಾಗಿಸಿಕೊಂಡಿದ್ದರು. ಇಂತಹ ಸಮಾಜ ಸೇವಕರಿಗೆ ಪತ್ನಿಯಾದ ಭುವನೇಶ್ವರೀ ದೇವಿಯವರೂ ಸಹ ಮಹಾ ಸಾಧ್ವಿಯಾಗಿದ್ದರು. ಹೆಣ್ಣು ಮಕ್ಕಳು ಇದ್ದರೂ ಗಂಡುಮಕ್ಕಳಿಗಾಗಿ ಹಂಬಲಿಸುತ್ತಿದ್ದ ಭುವನೇಶ್ವರೀ ದೇವಿಯವರು ಕಾಶಿಯ ವೀಶೇಶ್ವರನಿಗೆ ಮುಡಿಪುಗಳೊಂದಿಗೆ ವ್ರತ ಹರಕೆಗಳಿಂದು ಸದಾ ಅವನ ಧ್ಯಾನದಲ್ಲೇ ಹೆಚ್ಚು ಸಮಯ ಕಳೆಯ ತೊಡಗಿದರು. "ನಂಬಿ ನೆಚ್ಚಿ ಕರೆದೊಡೆ ಓ ಎನ್ನನೇ ಶಿವನು" ಎಂಬ ಮಾತು ಇಲ್ಲಿ ಸತ್ಯವಾಯಿತು.

ಕ್ರಿಸ್ತಶಕ 1863 ನೇ ಜನವರಿ 12 ರ ಕುಜ್ಝಟಿಕಾವೃತ ಹಿಮ ಮಲಿನ ಪುಷ್ಯ ಸಂಕ್ರಾಂತಿಯ ಸುಪ್ರಭಾತದಲ್ಲಿ ಭುವನೇಶ್ವರೀದೇವಿ ಭಾರತದ ಭಾಗ್ಯದ ಬಾಲಕ ಸ್ವಾಮಿ ವಿವೇಕಾನಂದರಿಗೆ ಜನ್ಮ ನೀಡಿದರು.

ಶಿಶುವಿಗೆ ನಾಮಕರಣ ಮಹೋತ್ಸವದಲ್ಲಿ ದುರ್ಗಾಚರಣ ದತ್ತರ ನೆನಪಿಗಾಗಿ "ದುರ್ಗಾದಾಸ" ನೆಂದು ಕರೆಯಬೇಕೆಂಬ ಸಲಹೆಯನ್ನು ಒಪ್ಪದ ಭುವನೇಶ್ವರೀ ದೇವಿ ಕಾಶಿಯ ವಿಶ್ವೇಶ್ವರನ

ಶ್ರೀ ಮು. ಕೃಷ್ಣಪ್ಪ

ದಯೆಯಿಂದ ಜನಿಸಿರುವುದರಿಂದ "ವೀರೇಶ್ವರ" ಕರೆದಳು. ಅನ್ನ ಪ್ರಾಶನ ಸಮಯದಿಂದ "ನರೇಂದ್ರನಾಥ" ಎಂಬ ಹೆಸರು ಪ್ರಚಲಿತವಾಯಿತು.

ಮಗು ಬೆಳೆಯತೊಡಗಿದಂತೆ ಯಾರಿಗೂ ಹೆದರದೆ ಸ್ವೇಚ್ಛೆಯಿಂದಿರಬೇಕೆಂಬ ಮನೋಭಾವ ಬಲಿಯತೊಡಗಿತು. ಮಹಾ ತುಂಟನಾದ ನರೇಂದ್ರನು ಭೂತನಾಥನ ಗಣದ ಯಾವುದೋ ತುಂಟ ಭೂತವೇ ಮಗನಾಗಿ ಬಂದಿದ್ದಾನೆ ಎಂದು ತಾಯಿ ನೊಂದುಕೊಳ್ಳುತ್ತಿದ್ದಳು. ಅಷ್ಟೇ ಸೂಕ್ಷ್ಮಗ್ರಾಹಿ ಆಗಿ ಬೆಳೆದ ಮಗನನ್ನು ಕುರಿತು ತಾಯಿ "ನರೇನ್ ನೀನು ಮುಂದೆ ಏನಾಗಬೇಕೆಂದಿರುವೆ?" ಎಂದು ಕೇಳಿದರೆ, 'ನಾನು ಜೋಡು ಕುದುರೆ ಹೊಡೆಯುವ ಕೋಚ್ ಮ್ಯಾನ್ ಆಗುತ್ತೇನೆ' ಎನ್ನುತ್ತಿದ್ದ. ಈ ಮಾತು ಭವಿಷ್ಯದಲ್ಲಿ ಬೇರೊಂದು ರೀತಿಯಲ್ಲಿ ನಿಜವಾಯಿತು. ಹಿಂದೂ ಧರ್ಮದ ಅಧ್ಯಾತ್ಮಿಕ ರಥವನ್ನು ವಿಶ್ವ ವಿಜಯ ಸಾಧಿಸುವತ್ತ ಸಾರಥ್ಯ ವಹಿಸಿದ.

ವಿಶ್ವನಾಥದತ್ತರ ಮನೆಗೆ ಹಲವಾರು ಕ್ಷೇತ್ರಗಳ ಪಂಡಿತರು, ಮೇಧಾವಿಗಳು ಬರುತ್ತಿದ್ದರು. ಅವರಲ್ಲಿ ಸಾಧು ಸಂನ್ಯಾಸಿ, ಫಕೀರರೂ ಇರುತ್ತಿದ್ದರು. ಅವರ ಮಧ್ಯೆ ನಡೆಯುತ್ತಿದ್ದ ಅಧ್ಯಾತ್ಮಿಕ ಚರ್ಚೆ ಮತ್ತು ಅವರು ಮಾಡುತ್ತಿದ್ದ ಜಪ, ಯೋಗಗಳನ್ನು ನೋಡುತ್ತಿದ್ದ ನರೇಂದ್ರ ತಾನೂ ಅವರಂತೆ ಮಾಡಬೇಕೆಂಬ ಬಯಕೆಯಿಂದ ಗುಟ್ಟಾಗಿ ಅಭ್ಯಾಸ ಮಾಡುತ್ತಿದ್ದ. ಹೀಗೆ ಮಾಡುತ್ತಿರಲು ನರೇಂದ್ರನ ಯೋಗಾಭ್ಯಾಸದ ಬಯಕೆ ಬಲವಾಗಿ ಬಲಿಯತೊಡಗಿತು. ಒಂದು ದಿನ ಶಿವನ ವಿಗ್ರಹದ ಮುಂದೆ ಮೈಗೆಲ್ಲ ವಿಭೂತಿಯನ್ನು ಬಳಿದುಕೊಂಡು ಉಟ್ಟ ಪಂಚೆಯನ್ನೇ ಕೌಪೀನವನ್ನಾಗಿ ಮಾಡಿಕೊಂಡು ಪದ್ಮಾಸನದಲ್ಲಿ ಯೋಗಕ್ಕೆ ಕುಳಿತಿರುವ ದೃಶ್ಯವನ್ನು ಕಂಡ ಮಾತೆ ಭುವನೇಶ್ವರೀದೇವಿ ಕಂಗಾಲಾದಳು. ತಾತ ದುರ್ಗಾಚರಣದತ್ತರಂತೆ ಮಗ ಎಲ್ಲಿ ಸನ್ಯಾಸಿಯಾಗಿ ಬಿಡುವನೋ ಎಂದು ಹೆದರಿದಳಾದರೂ, ದೈವೇಚ್ಛೆ ಮೀರುವವರಾರೆಂದು ಸಮಾಧಾನ ಮಾಡಿಕೊಂಡು ಮಗನನ್ನು ಕುರಿತು "ಏನಪ್ಪಾ ನರೇನ್ ಹೀಗೇಕೆ ಕುಳಿತಿರುವೆ" ಎಂದು ಕೇಳಿದರೆ "ಅಮ್ಮಾ ನಾನು ಶಿವ, ಶಿವನೇ ನಾನು" ಎಂದು ಉತ್ತರಿಸಿದ. ಮತ್ತೊಂದು ದಿನ, ಆಟಕ್ಕೆಂದು ಗೆಳೆಯರೊಂದಿಗೆ ಹೋದ ನರೇಂದ್ರ ಆಟದ ಮೈದಾನದಲ್ಲಿ ಪದ್ಮಾಸನ ಹಾಕಿ ಧ್ಯಾನ ಮಗ್ನನಾದ. ಉಳಿದ ಗೆಳೆಯರೂ ನರೇಂದ್ರನನ್ನು ಅನುಕರಿಸಿ ಧ್ಯಾನಕ್ಕೆ ಕುಳಿತರಾದರೂ ಅವರಿಗೆ ಅದು ಕೇವಲ ಆಟ ಮಾತ್ರವಾಗಿತ್ತು. ಆದರೆ ನರೇಂದ್ರ ಸಂಪೂರ್ಣವಾಗಿ ಮೈಮರೆತು ಧ್ಯಾನ ಮಗ್ನನಾಗಿ ಬಿಟ್ಟಿದ್ದ. ಸ್ವಲ್ಪ ಹೊತ್ತಿನ ನಂತರ ಒಂದು ಕಾಳಿಂಗ ಸರ್ಪ ಬಂದು ನರೇಂದ್ರನ ಮುಂದೆ ತನ್ನ ವಿಶಾಲವಾದ ಹೆಡೆಯನ್ನು ಬಿಚ್ಚಿ ತೂಗ ತೊಡಗಿತು. ಇದನ್ನು ಕಂಡ ನರೇಂದ್ರನ ಗೆಳೆಯರು ಹೆದರಿ ಓಡಿ ನರೇಂದ್ರನ ತಂದೆ ತಾಯಿಯರಿಗೆ ವಿಷಯ ತಿಳಿಸಿದರು. ಅವರೂ ಬಂದು ನೋಡುತ್ತಾರೆ. ಸರ್ಪ ಇನ್ನೂ ತಲೆದೂಗುತ್ತಲೇ ಇದೆ. ಆದರೆ ನರೇಂದ್ರ ಮಾತ್ರ ಯಾವುದರ ಪರಿವೆಯೂ ಇಲ್ಲದೆ ಧ್ಯಾನಮಗ್ನನಾಗಿದ್ದಾನೆ. ಎಲ್ಲರ ಮುಖದಲ್ಲೂ ಗಾಬರಿ ಕಳವಳ, ಹಾವಿನ ತಂಟೆಗೆ ಹೋದರೆ ಅದು ನರೇಂದ್ರನನ್ನು ಕಡಿಯುವುದೇನೋ ಎಂಬ ಭಯ. ತಲ್ಲಣ ತಾಂಡವಿಸುತ್ತಿದ್ದರೂ ಅಸಹಾಯಕರಂತೆ ಶಿಲಾ ಪ್ರತಿಮೆಗಳಂತೆ ನಿಂತು ನೋಡುತ್ತಿದ್ದಂತೆ ನಾಗ ಸರ್ಪ ಹೆಡೆ ಮಡಿಸಿ ಅಷ್ಟು ದೂರ ಹೋಗಿ ಯಾರ ಕಣ್ಣಿಗೂ, ಕಾಣದಂತೆ ಮಾಯವಾಯಿತು. ನರೇಂದ್ರನೂ ಧ್ಯಾನದಿಂದ ಮೈ ತಿಳಿದು ಕಣ್ಣು ಬಿಟ್ಟ. ಮೃತ್ಯುಪಾಶದಿಂದ ಬಿಡುಗಡೆ ಪಡೆದವರಂತೆ ಎಲ್ಲರಲ್ಲೂ ಚಲನೆಯುಂಟಾಯಿತು. ಭುವನೇಶ್ವರೀದೇವಿ ಓಡಿ ಹೋಗಿ ಮಗನನ್ನು ಎತ್ತಿ ಎದೆಗಪ್ಪಿಕೊಂಡು "ಹಾವು ನಿನಗೆ ಕಾಣಲಿಲ್ಲವೆ ಕಂದ" ಎಂದು ಕೇಳಿದಕ್ಕೆ "ಇಲ್ಲವಮ್ಮ ಯಾವುದೋ ಆನಂದಾನುಭೂತಿಯಲ್ಲಿ ನನಗೆ ಏನೂ ಕಾಣಲೇ ಇಲ್ಲ" ಎಂದು ಉತ್ತರಿಸಿದ. ಬೆಳೆಯುವ ಪೈರು ಮೊಳಕೆಯಲ್ಲೆ ಗೊತ್ತಾಗುವುದೆಂಬ ನಾಣ್ಣುಡಿಯಂತೆ ಮುಂದೆ ವಿಶ್ವ ವಿಖ್ಯಾತರಾಗುವ ನರೇಂದ್ರನ ಬಾಲ್ಯ ಅದರ ಸೂಚನೆಗಳನ್ನು ನೀಡಲಾರಂಭಿಸಿತ್ತು.

ನರೇಂದ್ರನಿಗೆ ಹದಿನಾಲ್ಕನೇ ವಯಸ್ಸಿನಲ್ಲಿ ಬಂದು ಹೊಟ್ಟೆ ನೋವಿನಿಂದಾಗಿ, ಸದೃಢ ಶರೀರ ಅಸ್ಥಿಪಂಜರದಂತಾಯಿತು. ಮಗನ ಸ್ಥಿತಿಯನ್ನು ಕಂಡ ತಂದೆ ತಾಯಿ ಗಾಬರಿಗೊಂಡರು. ಕಾರ್ಯನಿಮಿತ್ತ ಮಧ್ಯ ಪ್ರದೇಶದ ರಾಯಪುರಕ್ಕೆ ಹೋಗಿದ್ದ ವಿಶ್ವನಾಥದತ್ತರು ಹವಾಗುಣ ಬದಲಾಯಿಸಿದರೆ ನರೇಂದ್ರನ ಆರೋಗ್ಯ ಸುಧಾರಿಸಬಹುದೆಂದು ರಾಯಪುರಕ್ಕೆ ಕರೆದುಕೊಂಡು ಹೋದರು. ಅವರ ಊಹೆ ಸುಳ್ಳಾಗಲಿಲ್ಲ. ನರೇಂದ್ರನ ಆರೋಗ್ಯವೇನೋ ಸುಧಾರಿಸಿತು. ಆದರೆ ವಿದ್ಯಾಭ್ಯಾಸಕ್ಕೆ ತೊಂದರೆಯಾಯಿತು. ಆ ಊರಿನಲ್ಲಿ ಪಾಠಶಾಲೆ ಇಲ್ಲದಿದ್ದುದರಿಂದ ವಿಶ್ವನಾಥದತ್ತರು ಮಗನಿಗೆ ಮನೆಯಲ್ಲೇ ಇತಿಹಾಸ, ಸಾಹಿತ್ಯ, ದರ್ಶನಗಳ ಪಾಠ ಹೇಳತೊಡಗಿದರು. ಜನಪ್ರಿಯ ವ್ಯಕ್ತಿಯಾದ ವಿಶ್ವನಾಥದತ್ತರ ಮನೆಗೆ ಅಲ್ಲಿಯೂ ಅನೇಕ ವಿದ್ವಾಂಸರು ಬರುತ್ತಿದ್ದರು. ಸಾಹಿತ್ಯ, ಧರ್ಮ, ರಾಜಕೀಯ ಮುಂತಾದ ಅನೇಕ ವಿಷಯಗಳ ಚರ್ಚೆಯಾಗುತ್ತಿತ್ತು. ಅಂತಹ ಚರ್ಚೆಗಳಲ್ಲೆಲ್ಲ ನರೇಂದ್ರನು ಭಾಗವಹಿಸಿ ಕುತೂಹಲದಿಂದ ಕೇಳುತ್ತಿದ್ದನು. ಒಮ್ಮೆ ಒಬ್ಬ ಪ್ರಖ್ಯಾತ ಲೇಖಕರು ನರೇಂದ್ರನನ್ನು ಕುರಿತು – ಮಗು ನಿನ್ನಿಂದ ವಂಗ ಸಾಹಿತ್ಯ ಭಾರತೀಯ ಸಾಹಿತ್ಯದಲ್ಲಿ ಗೌರವನೀಯಸ್ಥಾನ ಪಡೆಯುತ್ತದೆ ಎಂದು ಆಶೀರ್ವದಿಸಿದರು.

ಎರಡು ವರ್ಷಗಳ ನಂತರ ಕಲಕತ್ತೆಗೆ ಹಿಂದಿರುಗಿದ ನರೇಂದ್ರನ ಆಗಮನ ಅವನ ಗೆಳೆಯ ಸಂಭ್ರಮದ ದಿನವಾಯಿತು. ಆದರೆ ಎರಡು ವರ್ಷಗಳ ಗೈರುಹಾಜರಿಯಿಂದಾಗಿ ತರಗತಿಗಳಿಗೆ ಸೇರಲು ಕಷ್ಟವಾಯಿತು, ನರೇಂದ್ರನ ಉತ್ತಮ ಗುಣ ಹಾಗೂ ಸದ್ವರ್ತನೆಗೆ ಮಾರು ಹೋಗಿದ್ದ ಉಪಾಧ್ಯಾಯರ ಪ್ರಯತ್ನದಿಂದ ಮೆಟ್ರಿಕ್ಯುಲೇಷಗೆ ಸೇರಲು ಸಾಧ್ಯವಾಯಿತು. ಅಭಿಮಾನದಿಂದ ಸೇರಿಸಿಕೊಂಡ ಉಪಾಧ್ಯಾಯರ ಶ್ರಮ ವ್ಯರ್ಥವಾಗಲಿಲ್ಲ. ನರೇಂದ್ರ ವ್ಯಾಸಂಗ ಮಾಡುತ್ತಿದ್ದ ಮೆಟ್ರೋಪಾಲಿಟನ್ ಸಂಸ್ಥೆಯಲ್ಲಿ ಆ ವರ್ಷ ಪ್ರಥಮ ದರ್ಜೆಯಲ್ಲಿ ನರೇಂದ್ರ ಒಬ್ಬ ಮಾತ್ರ ಉತ್ತೀರ್ಣನಾಗಿ ಸಂಸ್ಥೆಗೆ ಗೌರವ ತಂದು ಕೊಟ್ಟನು.

1880ಕ್ಕೆ ಹದಿನೆಂಟು ವರ್ಷಗಳು ತುಂಬಿದ ನರೇಂದ್ರನಾಥ ಅದೇ ವರ್ಷದಲ್ಲಿ ಕಾಲೇಜು ವ್ಯಾಸಾಂಗದ ಪೂರ್ವಭಾವೀ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ, ಕಾಲೇಜಿನ ವ್ಯಾಸಂಗ ಆರಂಭಗೊಂಡಿತು. ಸಹಜವಾಗಿ ಜ್ಞಾನ ದಾಹಿಯಾದ ನರೇಂದ್ರನ ವ್ಯಾಸಂಗ ಅವಿರತವಾಗಿ ಸಾಗತೊಡಗಿತು. ಬಾಲ್ಯದಲ್ಲಿ ತಾಯಿಯಿಂದ ಕೇಳಿದ್ದ ರಾಮಾಯಣ ಮಹಾಭಾರತ ಪುರಾಣಗಳ ಬಗ್ಗೆ ಆಳವಾದ ಅಭ್ಯಾಸದೊಂದಿಗೆ, ಪಾಶ್ಚಾತ್ಯ ಕವಿಗಳ ವಿಚಾರ ಧಾರೆಯನ್ನೂ ಜೊತೆ ಜೊತೆಗೆ ಅಭ್ಯಸಿಸ ತೊಡಗಿದ, ಡೆಕಾರ್ಟನ ಅಹಂವಾದ, ಹ್ಯೂಮ್‌ನ ನಿರೀಶ್ವರವಾದ, ಸ್ಪೆನ್ಸರ್‌ನ ಅಜ್ಞೇಯವಾದ ಮುಂತಾದ ಭಿನ್ನ ಭಿನ್ನ ವೈಚಾರಿಕ ವೈಚಾರಿಕ ತುಮುಲದಲ್ಲಿ ನರೇಂದ್ರನ ಮನಸ್ಸು ತತ್ತರಿಸತೊಡಗಿತು. ಯಾವುದನ್ನೂ ಸುಲಭವಾಗಿ ನಂಬದ ಮನಸ್ಸಿನಲ್ಲಿ ಸಂಶಯಗಳ ರಾಶಿ ಬೃಹದಾಕಾರವಾಗಿ ಬೆಳೆಯತೊಡಗಿದವು. ಸತ್ಯಾನ್ವೇಷಣೆಗಾಗಿ ಮನಸ್ಸಿನ ಆವೇಗ ಹೆಚ್ಚತೊಡಗಿತು. ಅದರ ಪರಿಹಾರಾರ್ಥವಾಗಿ ಆಳವಾದ ಅಭ್ಯಾಸವೂ ಮುಂದುವರಿಯಿತು. ಆರ್ಯಧರ್ಮ, ವೇದಗಳು, ಭಗವದ್ಗೀತೆ, ಪುರಾಣ, ಉಪನಿಷತ್‌ಗಳು, ಕಾಂಟ್, ಹೇಗಲ್, ಅರಿಸ್ಟಾಟಲ್, ಪ್ಲೇಟೊ, ವರ್ಡ್ಸ್ ವರ್ತ್, ಶೆಲ್ಲಿ ಮುಂತಾದ ಕವಿಗಳ, ದಾರ್ಶನಿಕರ ಗ್ರಂಥಗಳ ವ್ಯಾಸಂಗ ಮುಗಿದರೂ ನರೇಂದ್ರನ ಸಂಶಯಗಳು ಮಾಯವಾಗಲೂ ಇಲ್ಲ ಸತ್ಯದರ್ಶನವೂ ಆಗಲಿಲ್ಲ.

(23 ನೇ ಪುಟ ನೋಡಿ)



# ಗೃಹಲಕ್ಷ್ಮಿ





ದೇವೀಂ ಪ್ರಸನ್ನಾಂ
ಪ್ರಣತಾರ್ತಿಹಂತ್ರೀಂ |
ಯೋಗೀಂದ್ರಪೂಜ್ಯಾಂ
ಯುಗಧರ್ಮಪಾತ್ರೀಮ್ ||

ತಾಂ ಶಾರದಾಂ ಭಕ್ತಿ
ವಿಜ್ಞಾನದಾತ್ರೀಮ್ |
ದಯಾಸ್ವರೂಪಾಂ
ಪ್ರಣಮಾಮಿ ನಿತ್ಯಂ ||

ಶರಣಾಗತ ದುಃಖನಾಶಿನಿ, ಪ್ರಸನ್ನೆ, ಯೋಗೀಂದ್ರ ಪೂಜಿತೆ, ಯುಗಧರ್ಮರಕ್ಷಿಣಿ, ಭಕ್ತಿ ವಿಜ್ಞಾನದಾತೆ ಹಾಗೂ ದಯಾ ಸ್ವರೂಪಿಣಿಯಾದ ಶಾರದಾದೇವಿಯನ್ನು ನಿತ್ಯವೂ ನಮಸ್ಕರಿಸುತ್ತೇನೆ.

ಈ ರೀತಿ ಜಗತ್ತಿನ ಎಲ್ಲೆಡೆಗಳಲ್ಲಿ ಶ್ರೀ ಮಾತೆಯವರನ್ನು ಕೋಟಿಕೋಟಿ ಭಕ್ತರು ವಿಧವಿಧವಾಗಿ ಪ್ರಾರ್ಥಿಸುತ್ತಾರೆ. ಹೀಗೆ ಪೂರ್ವಪಶ್ಚಿಮ ರಾಷ್ಟ್ರಗಳಲ್ಲಿ ಶಾರದಾದೇವಿ ಯವರು ಭಕ್ತಕೋಟಿಯ ಹೃನ್ಮಂದಿರಗಳಲ್ಲಿ ಜಗದೀಶ್ವರಿಯಾಗಿ ನೆಲೆನಿಂತು ಪ್ರೀತಿಯ ಪೂಜೆ ಆರಾಧನೆಗಳಿಗೆ ಪಾತ್ರರಾಗಿ ಜಗನ್ಮಾತೆ ಯಾಗಿ ಬೆಳಗುತ್ತಿದ್ದಾರೆ.

'ಶಕ್ತಿಯು ಭಾರತದಲ್ಲಿ ಅಗೌರವಕ್ಕೆ ಈಡಾಗಿದೆ ಆದರಿಂದ ನಮ್ಮ ದೇಶ ಅಭಿವೃದ್ಧಿಗೊಳ್ಳದೆ ಹಿಂದುಳಿದಿದೆ' ಎಂದು ಹೇಳಿದ ಸ್ವಾಮಿ ವಿವೇಕಾನಂದರು, "ಶಕ್ತಿಯ ಸರಿಯಾದ ಪುನಶ್ಚೇತನಕ್ಕಾಗಿಯೇ ಶ್ರೀ ಮಾತೆಯವರು ಅವತರಿಸಿರುತ್ತಾರೆ" ಎಂದು ಘೋಷಿಸಿರುತ್ತಾರೆ.

ಶಾರದಾದೇವಿಯವರ ಜನನದ ವಿಚಾರ ವನ್ನು ಪರಿಶೀಲಿಸಿ ನೋಡಿದರೆ ದಿವ್ಯಶಕ್ತಿಯ ಅವತಾರವೇ ಅವರೆಂದು ಭಾಸವಾಗುತ್ತದೆ. ಕಲ್ಕತ್ತದಿಂದ 60 ಮೈಲು ಪಶ್ಚಿಮಕ್ಕಿರುವ 'ಜಯರಾಮವಟಿ' ಎಂಬ ಗ್ರಾಮದಲ್ಲಿ 1853 ನೆ ಇಸವಿ ಡಿಸೆಂಬರ ತಾ 22 ರಂದು ಶಾರದಾ ದೇವಿಯ ಜನನವಾಯಿತು. ತಂದೆ ಶ್ರೀರಾಮ ಚಂದ್ರಮುಖರ್ಜಿ; ತಾಯಿ ಶ್ರೀಮತಿ ಶ್ಯಾಮ ಸುಂದರೀದೇವಿ. ಈ ದಂಪತಿಗಳು ಸದಾಚಾರ ಸಂಪನ್ನರೂ ಸತ್ಯನಿಷ್ಠರೂ ಭಗವದ್ಭಕ್ತರೂ ಆಗಿದ್ದರು. ಒಮ್ಮೆ ಶಿಹೂರ್ ಎಂಬಲ್ಲಿಯ ದೇವಾಲಯಕ್ಕೆ ದೇವರದರ್ಶನಕ್ಕೆಂದು ಹೋಗಿದ್ದ ಶ್ಯಾಮಸುಂದರೀದೇವಿ ಅಲ್ಲಿಂದ ಹಿಂದಿರುಗುವಾಗ ಸ್ವಲ್ಪದೂರ ನಡೆದು ಬಳಲಿ ದಾಗ ದಾರಿಬದಿಯ ಮರ ಒಂದರ ಬುಡದಲ್ಲಿ ವಿಶ್ರಮಿಸಿದರಂತೆ. ಆಗ ಅತಿತೇಜಸ್ಸಿನಿಂದ ಕೂಡಿದ ಐದುವರ್ಷದ ಬಾಲಿಕೆಯೊಬ್ಬಳು ತನ್ನೆದುರು ಬಂದು ನಿಂತು 'ಅಮ್ಮಾ ನಾನು ನಿಮ್ಮ ಮನೆಗೆ ಬರುತ್ತೇನೆ' ಎಂದು ಹೇಳಿ ತನ್ನನ್ನು ಬಿಗಿದಪ್ಪಿಕೊಂಡಂತೆ ಮನಸ್ಸಿಗೆ ತೋರಿತು. ಕಣ್ತೆರೆದು ನೋಡಿದಾಗ ಯಾರೂ ಇರಲಿಲ್ಲ. ಇದೇನೋ ದೈವಸಂಕಲ್ಪವಿರ ಬೇಕೆಂದು ಗ್ರಹಿಸಿ ಶ್ಯಾಮಸುಂದರೀದೇವಿ ತನ್ನ ಮನೆಯದಾರಿ ಹಿಡಿದರು.

## ಶಾರದಾದೇವಿ

ಈ ಸೂಚನೆಯಂತೆ ಕೆಲಕಾಲ ಕಳೆಯಲು ಶ್ಯಾಮಸುಂದರೀದೇವಿ ಗರ್ಭಿಣಿಯಾಗಿ ಸುಂದರವಾದ ದೈವೀಕಳೆಯಿಂದ ಕೂಡಿದ ಹೆಣ್ಣುಮಗುವನ್ನು ಹೆತ್ತಳು. ತಂದೆತಾಯಿ ಯರ ಮುದ್ದಿನ ಮಗಳಾಗಿ ಹಳ್ಳಿಯ ವಾತಾವರಣದಲ್ಲಿ ಬೆಳೆದ ಆ ಬಾಲೆಗೆ ಐದು ವರ್ಷ ವಯಸ್ಸಾದಾಗ ಆ ಕಾಲದ ಪದ್ಧತಿ ಯಂತೆ ಅವಳ ವಿವಾಹವು ರಾಮಕೃಷ್ಣ ಪರಮಹಂಸರೊಡನಾಯಿತು. ತಂದೆತಾಯಿ ಯರಿಂದ 'ಶಾರದಾ' ಎಂದು ಕರೆಯಿಸಿ ಕೊಂಡ ಈ ಕೂಸೇ ಮುಂದೆ 'ಶಾರದಾ ದೇವಿ' ಆದಳು.

ಶಾರದಾದೇವಿ ಬಾಲ್ಯದಲ್ಲಿ ಪೂಜೆ ಮಾಡುವ ಆಟ ಹೊರತು ಇತರ ಮಕ್ಕಳಾಟ ದಲ್ಲಿ ಆಸಕ್ತಳಾಗಿರಲಿಲ್ಲ. ರಾಮಕೃಷ್ಣರು ಕೂಡಾ ದೇವರಧ್ಯಾನ ಬಿಟ್ಟರೆ ಬೇರೆ ಲೌಕಿಕ ಭೋಗಾಸಕ್ತರಾಗಿರಲಿಲ್ಲ. ಬಾಲ್ಯದಲ್ಲೇ ಮದುವೆಯಾದರೂ ಸತಿಪತಿಗಳ ಭೇಟಿ ಯಾಗದೆ ಕೆಲಕಾಲ ಕಳೆದುಹೋಯಿತು. ರಾಮಕೃಷ್ಣರ ದೇವರಧ್ಯಾನಾಸಕ್ತಿ ವಿವಾಹ ವಾದ ಮೇಲೆ ಮತ್ತೂ ಹೆಚ್ಚಾಗಿ ಪರಿಣ ಮಿಸಿತು. ಹೀಗಿರಲು ಒಂದುದಿನ ದೂರದ ದಕ್ಷಿಣೇಶ್ವರದ ದೇಗುಲ ಒಂದರಲ್ಲಿ ರಾಮಕೃಷ್ಣರು ಭಗವಂತನಿಗಾಗಿ ಅಳುತ್ತಾ ಹುಚ್ಚರಂತಾಗಿದ್ದಾರೆ ಎಂಬ ವಾರ್ತೆ ಜಯರಾಮವಟಿಯ ತವರುಮನೆ ಯಲ್ಲಿದ್ದ ಶಾರದಾದೇವಿಯವರ ಕಿವಿಗೂ ಮುಟ್ಟಿತು. ಇದನ್ನರಿತ ಆಕೆ ಪತಿಯ ದರ್ಶನಕ್ಕಾಗಿ ದಕ್ಷಿಣೇಶ್ವರಕ್ಕೆ ಬಂದು ಧ್ಯಾನ ನಿರತರಾಗಿದ್ದ ಪತಿದೇವನನ್ನು ಕಾಣುತ್ತಾರೆ. ಮಾನಸಿಕವಾಗಿ ಪ್ರಬುದ್ಧೆಯಾಗಿದ್ದ ಶಾರದಾ ದೇವಿಗೆ ರಾಮಕೃಷ್ಣರನ್ನು ಕಂಡಾಗ ದಿವ್ಯ ತೇಜಸ್ಸಿನಿಂದ ಕೂಡಿದ ದೇವಮಾನವರಾದ ತನ್ನ ಪತಿ ಹುಚ್ಚರಲ್ಲವೆಂದು ತಿಳಿಯುತ್ತದೆ, ಸ್ಪಷ್ಟವಾಗುತ್ತದೆ, ಆಧ್ಯಾತ್ಮಿಕ ಜ್ಞಾನೋದಯವಾಗುತ್ತದೆ.

ಅಂದಿನಿಂದ ಶ್ರೀ ಶಾರದಾದೇವಿ ತನ್ನ ಪತಿ ರಾಮಕೃಷ್ಣರೊಡನೆ ಯಾವ ಲೌಕಿಕ ಶಾರೀರಿಕ ಸಂಬಂಧವನ್ನೂ ಇಟ್ಟುಕೊಳ್ಳದೆ ಅವರ ಬಳಿಯಲ್ಲೇ ಇದ್ದು ಅವರ ಮಾರ್ಗ ದರ್ಶನದಂತೆ ಸಾಧನೆಯನ್ನು ಮಾಡಿ ಭಗವತ್ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ.

ಶ್ರೀ ಎಸ್. ತಿರುಮಲೇಶ್ವರ ಭಟ್ಟ

ಮುಂದೆ ಒಂದು ದಿನ ರಾಮಕೃಷ್ಣರು ದಕ್ಷಿಣೇಶ್ವರದ ಸಾಧನಾಮಂದಿರದಲ್ಲಿ ಶಾರದಾಮಾತೆಯವರ ದಿವ್ಯತೆ, ಪವಿತ್ರತೆ, ಅಧ್ಯಾತ್ಮಿಕತೆಗಳನ್ನು ಮನಗಂಡು ಅವರನ್ನು ತನ್ನ ಪೂಜಾಪೀಠದಲ್ಲಿ ಕುಳ್ಳಿರಿಸಿ ಆಕೆಯ ದೇಹದಲ್ಲಿ ಜಗನ್ಮಾತೆ ದೇವಿಯನ್ನು ಆವಾಹಿಸಿ ಪೂಜಿಸಿ "ಜಗದೀಶ್ವರಿ! ರಕ್ಷಿಸು!" ಎಂದು ಸಾಷ್ಟಾಂಗ ಪ್ರಣಾಮಮಾಡಿ ಮಾತೆಯವರ ಮಹತ್ವವನ್ನು ದಿವ್ಯತ್ವವನ್ನು ದೃಢೀಕರಿಸಿ ಜಗತ್ತಿಗೇ ತೋರಿಸಿಕೊಟ್ಟಿದ್ದಾರೆ.

ಶಾಲೆಗೆ ಹೋಗಿ ಶಿಕ್ಷಣವನ್ನು ಪಡೆಯ ದಿದ್ದರೂ ಶಾರದಾಮಾತೆಯವರು ರಾಮ ಕೃಷ್ಣರ ಮಾರ್ಗದರ್ಶನದಿಂದ ಆತ್ಮ ಸಾಕ್ಷಾತ್ಕಾರ ಮಾಡಿಕೊಂಡು ದಿವ್ಯಜೀವನ ವನ್ನು ನಡೆಸಿದರು. ಮಹಾವಿದ್ವಾಂಸ ರಿಂದಲೂ ಅಸಾಧ್ಯವಾದ ಜೀವನ ತತ್ತ್ವ ಗಳನ್ನು ಸಾಧಿಸಿ ಸಿದ್ಧಿ ಸಿಕೊಂಡರು. ಕ್ರಮೇಣ ರಾಮಾಯಣ ಮಹಾಭಾರತ ಗಳಂತಹ ಸನಾತನ ಧರ್ಮಸಂಸ್ಕೃತಿ ಗಳನ್ನು ಪ್ರತಿಪಾದಿಸುವ ಗ್ರಂಥಗಳನ್ನು ಇತರರಿಗೆ ತಿಳಿಸುವಷ್ಟು ಅಭ್ಯಾಸಮಾಡಿ ಕೊಂಡರು.

ಹೆಣ್ಣೆಂದರೆ ಕಾಮದ ಪಿಂಡವೆಂದು ತಿರಸ್ಕಾರದಿಂದ ಕಾಣುವವರೂ ಹೆಣ್ಣೆಂದರೆ ಭೋಗಸಾಮಗ್ರಿ ಎಂದು ಮೋಹಪರವಶ ರಾಗುವವರೂ ಶಾರದಾಮಾತೆಯವರ ದಿವ್ಯಜೀವನದ ಬಗ್ಗೆ ಸಾಕಷ್ಟು ತಿಳಿದು ಕೊಂಡರೆ ಅವರ ಜೀವನ ಅದೆಷ್ಟು ಪಾವನ ವಾಗುತ್ತದೆ.

ದೇವರ ಧ್ಯಾನ, ಜಪ, ತಪ, ನಾಮ ಸಂಕೀರ್ತನೆ, ಪ್ರಾರ್ಥನೆ ಎಲ್ಲವೂ ಸೋಮಾರಿ ಗಳ ವಿಹಾರಸಾಧನವೆಂದು ಹಾಸ್ಯಮಾಡುವ ವರಿಗೆ ಶಾರದಾಮಾತೆಯವರು ಸದುತ್ತರ ರೂಪವಾಗಿ ಬಾಳಿ ಬೆಳಗಿದ್ದಾರೆ. ನಿರ್ಮಲ ವಾದ ತನ್ನ ಜೀವನದಿಂದ ಬಡವ ಬಲ್ಲಿದ, ಪಾಪಿ ಪುನೀತರೆನ್ನದೆ ಎಲ್ಲರಗೂ ಸಂಸಾರದ ಕಷ್ಟ ಕೋಟಲೆಗಳನ್ನೆದುರಿಸುವ ಭರವಸೆ ಮಾರ್ಗದರ್ಶನವನ್ನು ನೀಡಿದ್ದಾರೆ.

ಶಾರದಾದೇವಿಯವರು ಮುಂಜಾವದ ಮೂರು ಗಂಟೆ ಹೊತ್ತಿಗೆ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಸ್ನಾನಾದಿ ನಿತ್ಯವಿಧಿ ಗಳನ್ನು ತೀರಿಸಿ ಶುಚಿರ್ಭೂತರಾಗಿ ಜಪ ತಪ ಧ್ಯಾನಗಳಲ್ಲಿ ನಿಯಮದಂತೆ ನಿರತರಾಗಿ ಸೂರ್ಯೋದಯದ ಹೊತ್ತಿಗೆ ಮನೆಗೆಲಸ ಗಳನ್ನೆಲ್ಲಾ ಶ್ರಮವಿಲ್ಲದಂತೆ ಮಾಡಿ ರಾತ್ರಿ ಹನ್ನೊಂದು ಗಂಟೆಯ ತನಕವೂ ಅವಿಶ್ರಾಂತ ವಾಗಿ ದುಡಿಯುತ್ತಿದ್ದರು. ಅವರ ದಿನಚರಿ ಯಲ್ಲಿ ಧ್ಯಾನ ಜಪತಪಗಳಲ್ಲದೆ ಸಾಂಸಾರಿಕ ಲೌಕಿಕ ವಿಚಾರಗಳೂ ಸೇರಿರುತ್ತಿದ್ದುವು. ತನ್ನ ಬಳಿಗೆ ಬಂದವರಿಗೆ ದಿವ್ಯಜೀವನದ ಮಾರ್ಗದರ್ಶನ ಮಾಡಿ ಮಂಗಳಾಶೀರ್ವಾದ ಮಾಡಿ ಮಹಾಮಾತೆ ಎನಿಸಿದ್ದರು. ಶಾರದಾದೇವಿಯವರು ಸಕಲಧರ್ಮಕ್ಕೂ ತಿಲಕಪ್ರಾಯರು, ಸೀತಾ ಸಾವಿತ್ರಿ, ಅನಸೂಯೆ, ಗಾರ್ಗಿಯರ ಸಾಲಿಗೆ ನಿಲ್ಲ ತಕ್ಕವರು. ತನ್ನ ಆತ್ಮಾರ್ಪಣ ಮನೋ ಭಾವದಿಂದ, ನಿರಪೇಕ್ಷ ಬುದ್ಧಿಯಿಂದ. ಉನ್ನತ ಸಾಧನೆಯಿಂದ, ನಿಷ್ಕಳಂಕ ಜೀವನ ದಿಂದ ಹಾಗೂ ಅನನ್ಯ ಭಗವದಾರಾಧನೆ ಯಿಂದ ಸಂಸಾರದಲ್ಲಿದ್ದು ಸತ್ಯಸ್ವರೂಪೀ ಪರಮಾತ್ಮನ ಸಾಕ್ಷಾತ್ಕಾರದಿಂದ ಇಂದಿನ ಮಹಿಳೆಯರಿಗೆಲ್ಲ ಅತ್ಯಗತ್ಯವಾಗಿ ಬೇಕಾ ಗಿರುವ ಆದರ್ಶವನ್ನು ಎತ್ತಿ ತೋರಿಸಿದ್ದಾರೆ.

ಶಾರದಾಮಾತೆಯವರು ಭಾರತದ ಆದ್ಯಂತ ಸಂಚರಿಸಿ ತಮ್ಮ ಜ್ವಲಂತಜೀವನದ ಮೂಲಕ ಸತ್ಯಸನಾತನಧರ್ಮದ ನಿತ್ಯ ನೂತನ ಸಂದೇಶವನ್ನು ಸಾರಿ, ಭಾರತೀಯ ನಾರೀಲೋಕಕ್ಕೇ ಒಂದು ದಾರಿಯನ್ನು ತೋರಿರುವರಲ್ಲದೆ ವನಿತಾಲೋಕಕ್ಕೆ ಒಂದು ವಿಶಿಷ್ಟವಾದ ಧರ್ಮದ ಬೆಳಕನ್ನು ಬೀರಿ ಮುನ್ನಡೆಯುವಂತೆ ಮಾಡಿದ್ದಾರೆ.

ಶಾರದಾದೇವಿಯವರ ಜೀವನದಿಂದ ಪಾಠಕಲಿತು ಭಾರತೀಯ ನಾರೀಧರ್ಮ ವನ್ನರಿತು ಧರ್ಮಸಾಧನೆಯಲ್ಲಿ ಪುರುಷರಿಗೆ ನೆರವಾಗುವುದು ಮತ್ತು ಆತ್ಮಸಾಧನೆ ಮಾಡಿ ಜೀವನವನ್ನು ಪಾವನಗೊಳಿಸುವುದೇ ತಮ್ಮ ಬಾಳಿನ ಚರಮಗುರಿ ಎಂದು ಕಂಡುಕೊಂಡರೆ ಮಾನವಸಮಾಜ ಉದ್ಧಾರವಾಗುವುದು. ಶಾರದಾದೇವಿಯವರು ರಾಮಕೃಷ್ಣಪರಮ ಹಂಸರ ಸತಿಯಾಗಿ, ಶಿಷ್ಯೆಯಾಗಿ, ಜಗತ್ತಿಗೇ ಭಗವತ್ ತತ್ತ್ವದ ಸಂದೇಶವನ್ನು ಸಾರಿ, ಭಕ್ತರಿಗೆ ಮಾತೆಯಾಗಿ, ಭವತಾರಿಣಿಯಾಗಿ ಎಲ್ಲರಿಂದಲೂ ಗೌರವ-ಆದರಗಳನ್ನು ಪಡ ಕೊಳ್ಳುವಂತಾಗಿ 1920 ನೆ ಇಸವಿ ಜುಲೈ 20 ರಂದು ಭಗವಂತನ ಪಾದ ಮೂಲವನ್ನು ಸೇರಿದರು. ಆ ದಿವ್ಯ ಚೇತನಶ್ರೀ ಇಂದು ಇಲ್ಲ ದಿದ್ದರೂ ಅದು ಬೀರಿದ ಬೆಳಕು ಶಾಶ್ವತವಾಗಿ ಜಗದುದ್ದಗಲಕ್ಕೂ ಪಸರಿಸಿದೆ. ಶಾರದಾ ದೇವಿಯವರು ಬೋಧಿಸಿದ ಜೀವನ ತತ್ತ್ವ ಗಳು ಪಾಶ್ಚಾತ್ಯನಾಗರಿಕತೆಯ ಅಂಧಕಾರ ದಲ್ಲಿ ಮುಗ್ಗರಿಸುತ್ತಿರುವ ಇಂದಿನ ನಾರೀ ಲೋಕಕ್ಕೆ ನಂದಾದೀಪವಾಗಿವೆ. ಅದರ ಬೆಳಕಿನಲ್ಲಿ ನಮ್ಮ ನಾರಿಯರು ನಡೆದು ಅಧ್ಯಾತ್ಮಿಕ ತಳಹದಿಯಲ್ಲಿ ಜೀವನ ನಡೆಸು ವಂತಾಗಲಿ. ಶ್ರೀ ಶಾರದಾದೇವಿಯವರ ದಿನ ಚರಿಯನ್ನು ಆದರ್ಶವಾಗಿಟ್ಟುಕೊಂಡು ಅದ ರಂತೆ ನಡೆಯುವ ಪ್ರಯತ್ನ ಮಾಡಲಿ!

|| ನಾರೀ ಸರ್ವತ್ರ ಪೂಜ್ಯತೇ ||

( 20 ನೇ ಪುಟದಿಂದ )

ಭಾರತೀಯ ಧರ್ಮ ಹಾಗೂ ಸಂಸ್ಕೃತಿಗಳ ಬಗ್ಗೆ ಅಪಾರ ಗೌರವ ಹೊಂದಿದ್ದ ಜನರಲ್ ಅಸೆಂಬ್ಲಿ ಇನ್‌ಸ್ಟಿಟ್ಯೂಟ್‌ನ ಪ್ರಿನ್ಸಿಪಾಲರಾಗಿದ್ದ ಪ್ರೊ॥ ಹೇಸ್ಟೆ, ಎಂಬುವವರು ಕಾಲೇಜಿನಲ್ಲಿ ವರ್ಡ್ಸ್‌ವರ್ತ್ ಕವಿಯ "ದಿ ಎಕ್ಸ್‌ಕರ್ಷನ್" ಎಂಬ ಕವನದ ಪಾಠಹೇಳುತ್ತ, ಧ್ಯಾನದ ಬಗ್ಗೆ ವಿವರಿಸುತ್ತ, ಬಾಹ್ಯಪ್ರಕೃತಿಯ ಸಂಬಂಧ ಲವಲೇಶವೂ ಇಲ್ಲದೆ ಪೂರ್ಣ ಧ್ಯಾನ ಸ್ಥಿತಿಯನ್ನು ಪಡೆಯುವುದು ತುಂಬಾ ದುರ್ಲಭ. ಹಾಗೆ ಪೂರ್ಣ ಧ್ಯಾನಸ್ಥಿತಿಯನ್ನು ಪಡೆದವರು ನನಗೆ ಗೊತ್ತಿರುವಂತೆ ದಕ್ಷಿಣೇಶ್ವರದಲ್ಲಿರುವ ರಾಮಕೃಷ್ಣ ಪರಮಹಂಸರೆಂದು ಹೇಳಿದರು. ಅವರ ಮಾತಿನಿಂದ ನರೇಂದ್ರನಲ್ಲಿ ಆನಂದದ ಲಘು ಕಂಪನವಾದರೂ ರಾಮಕೃಷ್ಣರನ್ನು ಅನೇಕ ದಿನಗಳವರೆಗೆ ನೋಡಲಾಗಲಿಲ್ಲ.

ಒಮ್ಮೆ ನರೇಂದ್ರ ತನ್ನ ಸ್ನೇಹಿತ ಸುರೇಂದ್ರನಾಥಮಿತ್ರರ ಮನೆಯಲ್ಲಿ ಏರ್ಪಡಿಸಿದ್ದ ಔತಣಕೂಟದಲ್ಲಿ ಭಾಗವಹಿಸಿ ಬಂದಿದ್ದ ಅತಿಥಿಗಳನ್ನು ಸಂತೋಷಪಡಿಸಲು ಹಾಡಬೇಕಾಯಿತು. ನರೇಂದ್ರ ತನ್ನ ಕೋಗಿಲೆ ಕಂಠದಿಂದ ಇಂಪಾಗಿ ಹಾಡಲು ಅತಿಥಿಗಳೆಲ್ಲ ತುಂಬಾ ಸಂತೋಷಗೊಂಡರು. ಅತಿಥಿಗಳಲ್ಲಿ ರಾಮಕೃಷ್ಣರೂ ಇದ್ದು, ಅವರ ದೃಷ್ಟಿ ನರೇಂದ್ರನಲ್ಲೇ ನಿಂತಿತು. ನರೇಂದ್ರನನ್ನು ಹತ್ತಿರ ಕರೆದು ಹಾಡು ಚೆನ್ನಾಗಿತ್ತೆಂದು ಮೆಚ್ಚಿ, ಒಮ್ಮೆ ದಕ್ಷಿಣೇಶ್ವರಕ್ಕೆ ಬರುವಂತೆ ಆಹ್ವಾನಿಸಿ ಹೊರಟುಹೋದರು. ಪರೀಕ್ಷೆಗಳ ಸಿದ್ಧತೆಯಲ್ಲಿದ್ದ ನರೇಂದ್ರ ಕೆಲವುವಾರಗಳು ದಕ್ಷಿಣೇಶ್ವರಕ್ಕೆ ಹೋಗಲು ಆಗಲಿಲ್ಲ.

ನರೇಂದ್ರ ತನ್ನಗೆಳೆಯರೊಂದಿಗೆ ದಕ್ಷಿಣೇಶ್ವರದ ರಾಮಕೃಷ್ಣರ ಆಶ್ರಮಕ್ಕೆ ಹೋದಾಗ, ರಾಮಕೃಷ್ಣರು ಅರೆಯೋಗಾವಸ್ಥೆಯಲ್ಲೇ ಕುಳಿತಿದ್ದರು. ನರೇಂದ್ರ ಬಂದೊಡನೆ ಎಲ್ಲರನ್ನೂ ಆಹ್ವಾನಿಸಿ ಎಲ್ಲರೂ ಕುಳಿತ ಮೇಲೆ ಒಂದು ಹಾಡು ಹಾಡುವಂತೆ ಕೇಳಿದರು. ನರೇಂದ್ರ ಒಂದು ಬಂಗಾಲಿ ಗೀತೆಯನ್ನು ಹಾಡುತ್ತಿದ್ದಂತೆಯೇ ರಾಮಕೃಷ್ಣರು ತಮ್ಮ ಬಾಹ್ಯಪ್ರಜ್ಞೆಯನ್ನು ಕಳೆದು ಕೊಂಡು ಧ್ಯಾನಸ್ಥರಾದರು.

ನರೇಂದ್ರ ರಾಮಕೃಷ್ಣರನ್ನು ಕುರಿತು "ನೀವು ದೇವರನ್ನು ನೋಡಿರುವಿರಾ?" ಎಂದು ಪ್ರಶ್ನಿಸಿದನು. ಅದಕ್ಕೆ ರಾಮಕೃಷ್ಣರು 'ಹೌದು ನೋಡಿದ್ದೇನೆ. ನೋಡುವುದೇ ಅಲ್ಲ ಮಾತಾಡಲೂ ಬಹುದು. ಆದರೆ ಪ್ರಾಪಂಚಿಕ ವಿಷಯಗಳಿಗಾಗಿ ಕೊಡಗಟ್ಟಲೆ ಕಣ್ಣೀರು ಸುರಿಸುವ ಜನ ದೇವರ ಸಾಕ್ಷಾತ್ಕಾರಕ್ಕಾಗಿ ಒಂದು ಹನಿ ಕಣ್ಣೀರನ್ನೂ ಹಾಕುವುದಿಲ್ಲ. ಪ್ರಾಪಂಚಿಕ ವಿಷಯಗಳೇ ಜೀವನ ಧ್ಯೇಯವಾಗಿರುವ ಈ ಜನರ ಮಾತುಗಳನ್ನು ಕೇಳಿ ಕೇಳಿ ಸಾಕಾಗಿದೆ' ಎಂದು ಹೇಳಿದರು. ಸಾಯಂಕಾಲವಾಗುತ್ತಿದ್ದಂತೆ ನರೇಂದ್ರ ಗೆಳೆಯರೊಡನೆ ಕಲ್ಕತ್ತೆಗೆ ಹೊರಟು ನಿಂತ. ರಾಮಕೃಷ್ಣರು ಅಇಷ್ಟದಿಂದಲೇ ಬೀಳ್ಕೊಟ್ಟರು.

ಕಲ್ಕತ್ತೆಗೆ ಹಿಂದಿರುಗಿದ ನರೇಂದ್ರನ ಮನಸ್ಸು ಅಪ್ರಯತ್ನವಾಗಿ ದಕ್ಷಿಣೇಶ್ವರದ ಕಡೆ ಸೆಳೆಯುತ್ತಲೇ ಇತ್ತು. ನರೇಂದ್ರ ಮತ್ತು ರಾಮಕೃಷ್ಣರ ಸಂಬಂಧ ಯೋಗ ಹಾಗೂ ಪ್ರೇಮ ಮೂಲದ್ದಾಗಿತ್ತು. ನರೇಂದ್ರನನ್ನು ರಾಮಕೃಷ್ಣರು ಎಷ್ಟು ಪ್ರೀತಿಸುತ್ತಿದ್ದರೆಂದರೆ, ನರೇಂದ್ರ ಕೆಲವುದಿನಗಳು ದಕ್ಷಿಣೇಶ್ವರಕ್ಕೆ ಬಾರದಿದ್ದರೆ ಚಡಪಡಿಸುತ್ತಿದ್ದರು. ಎದುರಿಗೆ ಬಂದ ತಕ್ಷಣ ಹೆಸರನ್ನೂ ಕರೆಯಲಾಗದೆ ಆನಂದಾನುಭೂತಿಯಿಂದ ಧ್ಯಾನಸ್ಥರಾಗಿ ಬಿಡುತ್ತಿದ್ದರು. ಒಮ್ಮೆ ವಿಜಯಕೃಷ್ಣ ಗೋಸಾಯಿಯವರು ರಾಮಕೃಷ್ಣರನ್ನು ಸಂದರ್ಶಿಸಿ ಹಿಂದಿರುಗಿದ ಮೇಲೆ ರಾಮಕೃಷ್ಣರು ಶಿಷ್ಯರನ್ನು ಕುರಿತು, 'ವಿಜಯನಲ್ಲಿ ಜ್ಞಾನದ ಬೆಳಕು ಮೋಂಬತ್ತಿಯಂತೆ ಉರಿಯುತ್ತಿದ್ದರೆ, ನರೇಂದ್ರನಲ್ಲಿ ಸೂರ್ಯ ಪ್ರಕಾಶದಂತೆ ಪ್ರಜ್ವಲಿಸುತ್ತಿದೆ' ಎಂದರು. ನರೇಂದ್ರನಿಗೆ ಈ ಮಾತಿನಿಂದ ಕಸಿವಿಸಿಯಾಗುತ್ತಿತ್ತು. ರಾಮಕೃಷ್ಣರಿಗೆ ದಯವಿಟ್ಟು ನನ್ನಲ್ಲಿ ಇಲ್ಲದ ವಿಶೇಷಗಳನ್ನು ಆರೋಪಿಸಿ ಉತ್ಪ್ರೇಕ್ಷೆ ಮಾಡಬೇಡಿ ಎಂದ ಆಕ್ಷೇಪಿಸಿದಾಗ ರಾಮಕೃಷ್ಣರು 'ನಾನು ನಿನ್ನ ಮಾತನ್ನು ಕೇಳುವುದಿಲ್ಲ ತಾಯಿಯನ್ನೇ ಕೇಳುತ್ತೇನೆ' ಎಂದು ಕಾಳೀದೇವಿಯ ಮುಂದೆ ಧ್ಯಾನಸ್ಥರಾಗಿ ತಾಯಿಯನ್ನೇ ಕೇಳಿದರು. ಕಾಳೀದೇವಿ 'ಕೆಲವು ದಿನಗಳ ನಂತರ ಅವನೇ ಒಪ್ಪಿಕೊಳ್ಳುತ್ತಾನೆ' ಎಂದು ಹೇಳಿದಳು. ತಾಯ ಆದೇಶದಂತೆ ರಾಮಕೃಷ್ಣರೂ ಮತ್ತೆ ಮಾತಾಡಲಿಲ್ಲ. ನರೇಂದ್ರ ಕಲ್ಕತ್ತೆಗೆ ಹೊರಟು ನಿಂತ.

ಇಂತಹ ಮಹಾ ಆತ್ಮಗಳ ಸಂಗಮ ಗುರುಶಿಷ್ಯರೂಪದಲ್ಲಿ ಭಾರತದ ವಂಗ ಭೂಮಿಯಲ್ಲಿ ದಕ್ಷಿಣೇಶ್ವರದಲ್ಲಿ ರೂಪುಗೊಂಡು ಭಾರತದ ಆಧ್ಯಾತ್ಮ ವೈಜಯಂತಿಯನ್ನು ಜಗತ್ತಿನ ಮೂಲೆ ಮೂಲೆಯಲ್ಲೂ ಎತ್ತಿ ಹಿಡಿದು ಇಡೀ ಜಗತ್ತೇ ಆಧ್ಯಾತ್ಮಿಕ ದಾಹ ತೀರಿಸಿಕೊಳ್ಳಲು ಭಾರತದತ್ತ ನೋಡುವಂತೆ ಮಾಡಿದ ಆಧ್ಯಾತ್ಮಿಕ ಚಕ್ರವರ್ತಿ ಸ್ವಾಮಿ ವಿವೇಕಾನಂದ. ★

(18ನೇ ಪುಟದಿಂದ)

ಮಾನವನ ಪ್ರಬಲ ಶತ್ರು. ಮನಸ್ಸಿನಿಂದಾಗಲೀ ಮಾತಿನಲ್ಲಿಯಾಗಲೀ, ಕಾರ್ಯದಲ್ಲಿಯಾಗಲೀ ಯಾರಿಗೂ ಕೇಡನ್ನುಂಟುಮಾಡಬಾರದು.

ಇತರರ ಸ್ವತ್ತಿಗೆ ಆಶಿಪಡದಿರುವುದು ಅನಭಿಧ್ಯ. ದುರ್ಬಲವಿಲ್ಲದಿರುವುದು ಅನವಸಾದ, ಕಾಲದೇಶ ವರ್ತಮಾನ ವಿಷಯಗಳಿಂದ ಮನೋದೌರ್ಬಲ್ಯ ವುಂಟಾಗುವುದು. ಇಂತಹ ದುರ್ಬಲ ಮನ ಸ್ಸುಳ್ಳವನು ಮೋಕ್ಷವನ್ನು ಪಡೆಯಲಾರ ಎಂದು ಉಪನಿಷತ್ತು ತಿಳಿಸುವುದು.

ಅನುದ್ಧರ್ಷ ಎಂದರೆ ವಿಶೇಷ ಉಲ್ಲಾಸ ಹೊಂದ ದಿರುವುದು. ವಿಶೇಷ ಆನಂದ, ವಿಶೇಷದುಃಖ ಇವೆರಡೂ ಭಕ್ತಿಯೋಗಕ್ಕೆ ವಿರೋಧ. ಇವು ಗಳನ್ನು ಮನಸ್ಸಿನಿಂದ ದೂರಮಾಡಿ ಸಮ ಚಿತ್ತತೆ ಯಿಂದ ಭಕ್ತನು ಪರಮಾತ್ಮ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸಬೇಕು.

"ಪರಭಕ್ತಿ, ಪರಜ್ಞಾನ ಪರಮ ಭಕ್ತ್ಯೈಕ ಸ್ವಭಾವಂ ಮಾ ಕುರುಷ್ವ" ಎಂದರು ಭಗವ ದ್ರಾಮಾನುಜರು. ಭಗವಂತನ ವಿಷಯದಲ್ಲಿ ಉಂಟಾಗುವ ಪ್ರೀತಿ ವಿಶೇಷವಾದ ಧ್ಯಾನವು ಸಾಧಾರಣ ಭಕ್ತಿ. ಸತ್ಸಂಗದಿಂದ ಉಂಟಾಗ ತಕ್ಕ ಈ ಭಕ್ತಿಯು ಶಾಸ್ತ್ರಜ್ಞಾನದಲ್ಲಿ ಅಭಿರುಚಿ ಯನ್ನೂ ಪರಮಾತ್ಮನಲ್ಲಿ ಪ್ರೀತಿಯನ್ನೂ ಉಂಟು ಮಾಡಿ, ಕರ್ಮಯೋಗ, ಜ್ಞಾನಯೋಗಗಳ ಮೂಲಕ ಭಕ್ತಿ ರೂಪಧ್ಯಾನವನ್ನು ಅವಲಂಬಿಸು ವಂತೆ ಮಾಡುತ್ತದೆ. ಇದು ಪರಭಕ್ತಿ. ಇಂತಹ ಪರಭಕ್ತಿಯು ಪರಮಾತ್ಮನ ಪರಿಪೂರ್ಣ ಪರ ಬ್ರಹ್ಮಾನುಭವಕ್ಕೆ ಸಮಾನವಾದ ಸಾಕ್ಷಾತ್ಕಾರ ವನ್ನುಂಟುಮಾಡುತ್ತದೆ. ಇಂತಹ ಪ್ರೀತಿ ಅತಿಶಯವೇ ಪರಮ ಭಕ್ತಿ. ಈ ಪರಮ ಭಕ್ತಿಯು ಪರಿಪೂರ್ಣ ಬ್ರಹ್ಮಾನುಭವ ಅನ್ವೇಷ್ಟೆಯಿಂದ ಮೋಕ್ಷಪಡೆಯುವ ಹಾಗೆ ಮಾಡುತ್ತದೆ. ಇದೇ ಪರಜ್ಞಾನ.

ಪರಮಾತ್ಮನನ್ನು ಏಕಾಂತ ಭಕ್ತಿ ಯಿಂದಾಗಲೀ, ಪ್ರಪತ್ತಿಯಿಂದಾಗಲೀ, ಭಜಿಸುವ ಭಕ್ತರಿಗೆ ಸ್ವಾಮಿಯ ಅನುಗ್ರಹವು ದೊರೆತು ಅವರೆಲ್ಲ ಸಮರಾಗುವರು. ಇದನ್ನು ವೇದಾಂತ ದೇಶಿಕರು ಹೀಗೆ ಉದಹರಿಸಿದ್ದಾರೆ.

ನಿಷಾದಾನಾಂ ನೇತಾ ಕಪಿ ಕುಲಪತಿಃ
ಕಾಪಿ ಶಬರೀ।
ಕುಚೇಲಃ ಕುಬ್ಜಾ ಸಾ ವ್ರಜ
ಯುವತಯೋ ಮಾಲ್ಯ ಕೃದಿತಿ॥
ಅಮೀಷಾಂ ನಿಮ್ನತ್ವಂ ವೃಷ
ಗಿರಿಪತೇ ರುನ್ನತಮಪಿ।
ಪ್ರಭೂತೈಃ ಸ್ರೋತೋಭಿಃ ಪ್ರಸ
ಭಮನು ಕಂಪೇ ಸಮಯಸಿ॥

ಬೇಟೆ ವೃತ್ತಿಯ ಶಬರರಿಗೆ ಯಜಮಾನನಾದ ಗುಹನು, ತೋಟಗಳನ್ನು ಧ್ವಂಸಮಾಡುವ ಸ್ವಭಾವವುಳ್ಳ ಕಪಿರಾಜನಾದ ಸುಗ್ರೀವನು, ಶಬರ ಕುಲದ ಶಬರಿಯೂ, ಹರಕುಬಟ್ಟೆಯ ಕುಚೇಲನೂ, ವಕ್ರದೇಹದ ಕುಬ್ಜೆಯೂ, ಹಾಲು ಮಾರುವ ಗೋಪಸ್ತ್ರೀಯರೂ, ಹೂವಾಡಿಗ ಕುಲದವನೂ, ಮಾಂಸಭಕ್ಷಿಯಾದ ಜಟಾಯುವು – ಇವರನ್ನೆಲ್ಲಾ ಪರಮಾತ್ಮನ ದಯೆಯು ಸಮರನ್ನಾಗಿಸಿಬಿಟ್ಟಿತು. ಜಲಪ್ರವಾಹವು ಸಣ್ಣಕಲ್ಲು ದೊಡ್ಡಕಲ್ಲುಗಳನ್ನು ನೀರಿನಿಂದ ಮುಚ್ಚಿ ಸಮನಾಗಿ ಮಾಡುವಂತೆ ಸ್ವಾಮಿಯ ದಯೆಯು ಎಲ್ಲರನ್ನೂ ಸಮರನ್ನಾಗಿ ಮಾಡಿತು.

ಭಕ್ತಿಯೋಗದ ಮುಖ್ಯ ಲಕ್ಷಣಗಳು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ. ಇವುಗಳಲ್ಲಿ ಶ್ರವಣ, ಕೀರ್ತನ ಮತ್ತು ಸ್ಮರಣಗಳು ವೇದಾಂತತತ್ತ್ವದ ಧ್ಯಾನಮಾರ್ಗಕ್ಕೆ ಸೇರಿವೆ ಮತ್ತು ಜ್ಞಾನಯೋಗದ ಮೂಲಕ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆಯಬೇಕೆಂದು ತಿಳಿಸುತ್ತವೆ. ಪಾದಸೇವನ, ಅರ್ಚನ, ವಂದನ ಇವು ಮೂರೂ ಕರ್ಮಯೋಗದ ಮೂಲಕ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆಯಬೇಕೆಂದು ನಿರೂಪಿ ಸುತ್ತವೆ. ದಾಸ್ಯ, ಸಖ್ಯ, ಆತ್ಮನಿವೇದನ–ಇವು ಮೂರೂ ಪರಮಾತ್ಮನಲ್ಲಿ ಶರಣಾಗತಿಮಾಡಿ ಉಪಾಸನೆಯ ಮೂಲಕ ಪರಮಾತ್ಮನ ನಿತ್ಯ ಕೈಂಕರ್ಯ ರೂಪಸಾನ್ನಿಧ್ಯ ಪಡೆಯಬಹುದೆಂದು ನಿರೂಪಿಸುತ್ತವೆ.

ಭಕ್ತಿಯೋಗ ವೈಲಕ್ಷಣ್ಯವನ್ನು ಹೀಗೆ ಸಂಗ್ರಹಿಸಬಹುದು. ಪರಮಾತ್ಮನ ಮೇಲಿನ ನಿರಂತರ ತೀವ್ರತರ ಪ್ರೀತಿಯೇ ಭಕ್ತಿಯೋಗ, ಕರ್ಮಯೋಗ, ಜ್ಞಾನಯೋಗದ ಮೂಲಕ ಪಡೆಯುವ ಪರಬ್ರಹ್ಮ ಸಾಕ್ಷಾತ್ಕಾರವು ಭಕ್ತಿ ಯೋಗಕ್ಕೆ ಸಾಧನವಾಗುವುದು. ಮುಮುಕ್ಷುವಿ ನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮ ನನ್ನು ಕುರಿತು ಸತತಧ್ಯಾನ ಮಾಡಬೇಕು. ಭಕ್ತಿ ಯೋಗಾಚರಣೆಯನ್ನು ಪೂರ್ಣಗೊಳಿಸುವುದಕ್ಕೆ ಸ್ವಾಮಿಯ ಚರಣ ಕಮಲಗಳಲ್ಲಿ ಶರಣಾಗತಿ ಯನ್ನು ಮಾಡಬೇಕು. ಇಂತಹ ಪ್ರಪತ್ತಿಯಿಂದ ಕೂಡಿದ ಉಪಾಸನವೇ ಪರಿಪೂರ್ಣ ಭಕ್ತಿ ಯೋಗವು. ★

# ಆದರ್ಶ ಸತಿ ಸೀತೆ

ರಘುಕುಲ ತಿಲಕನಾದ ಶ್ರೀರಾಮನ ಧರ್ಮಪತ್ನಿ, ಸಾಧ್ವೀ ಶಿರೋಮಣಿ ಸೀತೆಯಾಗಿದ್ದಾಳೆ. ಅವಳು ತನ್ನ ಜೀವನದಲ್ಲಿ ಬಂದ ಕಷ್ಟಕಾರ್ಪಣ್ಯಗಳ ಸಹಿಷ್ಣುತೆಯ ಸಾಕಾರಮೂರ್ತಿ ಎನಿಸಿದ್ದಾಳೆ. ಜೀವನದ ಹೆಜ್ಜೆ ಹೆಜ್ಜೆಗೂ ಆದರ್ಶ ನಾರೀ ಧರ್ಮವನ್ನು ತನ್ನ ನಡೆನುಡಿಗಳಿಂದ ತೋರಿಸಿಕೊಟ್ಟಿದ್ದಾಳೆ. ಅವಳ ಜೀವನದಲ್ಲಿ ಸಿಹಿಗಿಂತ ಕಹಿ ಸನ್ನಿವೇಶಗಳೇ ಹೆಚ್ಚು. ಆದರೂ ಕುಗ್ಗದೇ, ತಗ್ಗದೇ, ಬಗ್ಗದೇ ಧೈರ್ಯದಿಂದ ಎಡರುಗಳನ್ನು ಎದುರಿಸಿ ಆದರ್ಶ ಜೀವನ ನಡೆಸಿ ಆದರ್ಶಪ್ರಾಯಳಾಗಿದ್ದಾಳೆ. ಲಕ್ಷ್ಮಣನು ಅವಳನ್ನು ಕಾಡಿನಲ್ಲಿ ಒಂಟಿಯಾಗಿ ಬಿಟ್ಟುಹೋದಾಗ, ಅವಳು ಶ್ರೀರಾಮನನ್ನು ದೂಷಿಸದೇ "ಕರುಣಾಳು ರಾಘವನಲ್ಲಿ ತಪ್ಪಿಲ್ಲ, ಕಡು ಪಾತಕಂಗೈದು ಪೆಣ್ಣಾಗಿ ಜನಿಸಿದುದು ತಪ್ಪು" ಎನ್ನುವಾಗ ಅವಳ ಮನಸ್ಸಿನ ಸ್ಥೈರ್ಯ, ಕಷ್ಟಸಹಿಷ್ಣುತೆಯ ಅರಿವು ಆಗದೇ ಇರದು.

ಪಿತೃವಾಕ್ಯ ಪರಿಪಾಲನೆಗಾಗಿ ಶ್ರೀರಾಮ ಕಾಡಿಗೆ ಹೊರಟು ನಿಲ್ಲುತ್ತಾನೆ. ಆಗ ಅವನೊಂದಿಗೆ ಸೀತೆಯು ಕಾಡಿಗೆ ಹೋಗಬೇಕಾದ ಅವಶ್ಯಕತೆ ಇರಲಿಲ್ಲ. ಆದರೂ ಪತಿಯ ಕಷ್ಟಗಳಲ್ಲಿ ಸಹಭಾಗಿಯಾಗುವುದು ತನ್ನ ಕರ್ತವ್ಯವೆಂದು ತಿಳಿದು, ಶ್ರೀರಾಮನು ಅದೆಷ್ಟೋ ಬಾರಿ ಬೇಡವೆಂದರೂ ಪತ್ನೀ ಧರ್ಮವನ್ನು ಅನುಸರಿಸಿ ಹೊರಡುತ್ತಾಳೆ. ಸುಖದ ಸುಪ್ಪತ್ತಿಗೆಯಲ್ಲಿ ಇರಬೇಕಾದ ಆ ಮಹಾರಾಣಿ ಕಾಡಿನಲ್ಲಿ ಎಲೆಗಳ ಮೇಲೆ ಗುಡಿಸಲಿನಲ್ಲಿ ವಾಸಿಸುವಾಗ ಅವಳೆಂದೂ ನಿಟ್ಟುಸಿರು ಬಿಟ್ಟವಳಲ್ಲ. ಪ್ರತಿಯೊಬ್ಬರೂ ಪರಿಸರಕ್ಕೆ ಹೊಂದಿಕೊಂಡು ಇರಬೇಕೆನ್ನುವ ಆದರ್ಶವನ್ನು ಇಲ್ಲಿ ತೋರಿಕೊಡುತ್ತಾಳೆ.

ರಾವಣನು ಸೀತೆಯನ್ನು ಅಪಹರಿಸಿಕೊಂಡು ಲಂಕೆಗೆ ಹೋದ ಮೇಲೆ ಅಲ್ಲಿ ಅವಳು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಅಲ್ಲಿ ರಾಕ್ಷಸಿಯರೆಲ್ಲರೂ ರಾವಣನ ವರ್ಣನೆಮಾಡಿ ಅವನ ವಶವಾಗೆಂದು ಹೇಳುವವರೇ. "ಹೇ ಸೀತೆಯೇ, ರಾವಣನು ಪುಲಸ್ತ್ಯರ ಕುಲದಲ್ಲಿ ಹುಟ್ಟಿದವನು. ವೇದ ವೇದಾಂಗ ಪಾರಂಗತನು. ವಿಶ್ವದ ಐಶ್ವರ್ಯದಿಂದ ಬ್ರಹ್ಮನಿಗೆ ಸಮನು. ಯಾವ ಗುಣಗಳೂ ಇಲ್ಲದ ರಾಮನನ್ನು ತ್ಯಜಿಸಿ ಮಹಾರಾವಣನನ್ನು ವರಿಸು" ಎನ್ನುವವರೇ ಆಗಿದ್ದರು. ಸೀತೆಯು ಮನಸ್ಸಿನ ಸಮತೆಯನ್ನು ಕಾಯ್ದುಕೊಂಡು "ನನ್ನ ಪತಿಯಾದ ಶ್ರೀರಾಮನು ಸಗುಣನಾಗಲಿ, ನಿರ್ಗುಣನಾಗಲಿ ಅವನೇ 'ನನಗೆ ಗತಿ' ನೀವು ಬೇಕಾದರೆ ನನ್ನನ್ನೇ ತಿಂದು ಬಿಡಿರಿ" ಎನ್ನುತ್ತ ಇಂಥ ಮಾತುಗಳನ್ನು ಕೇಳಲಾರೆ, ಎಂದು ಕಿವಿ ಮುಚ್ಚಿಕೊಳ್ಳುತ್ತಾಳೆ. 'ಪತಿಯೇ ದೈವ'ವೆಂಬುದನ್ನು ತಿಳಿಸುತ್ತ ಅವರು ತೋರುವ ಯಾವ ಆಸೆ ಆಮಿಷಗಳಿಗೂ ಒಲಿಯಾಗುವುದಿಲ್ಲ. ಆ ರಾಕ್ಷಸಿಯರು ಎಷ್ಟೇ ಜಬರಿಸಿದರೂ ಧೈರ್ಯಗೆಡುವುದಿಲ್ಲ. ನಂತರ ಅಶೋಕ ವನದಲ್ಲಿ ಮೊದಲ ಬಾರಿಗೆ ಹನುಮಂತನು ಬಂದು ನಮಸ್ಕರಿಸಿದಾಗ ಅವಳು ಅವನನ್ನು ನೋಡಿ "ಸತ್ಯ ಹೇಳು ನೀನು ರೂಪಾಂತರವನ್ನು ತಾಳಿದ ರಾವಣನೇ ಆಗಿರುವೆಯಾ?" ಎನ್ನುತ್ತಾಳೆ. ಮತ್ತು ಶ್ರೀರಾಮನ ದೂತನೆಂದ ಕ್ಷಣ ರಾಮನ ಲಕ್ಷಣಗಳನ್ನು ಕೇಳಿ ಖಚಿತ ಮಾಡಿಕೊಳ್ಳುತ್ತಾಳೆ. ಶ್ರೀರಾಮ ಮುದ್ರಿಕೆಯನ್ನು ಕೊಟ್ಟಾಗ ಅವಳು ಆನಂದ ಪರವಶಳಾಗಿ ಆತುರದಿಂದ 'ರಾಮನು ಸೌಮಿತ್ರಿಯಿಂದ ಕೂಡಿ ಯಾವಾಗ ಬರುತ್ತಾನೆ? ಯಾವಾಗ ತನ್ನನ್ನು ಕರೆದುಕೊಂಡು ಹೋಗುತ್ತಾನೆ?' ಎಂಬುದಾಗಿ ಕೇಳುತ್ತಾಳೆ. ಇಲ್ಲಿ ಸಹಜವಾಗಿ ಸ್ತ್ರೀಧರ್ಮವನ್ನು ಪ್ರಕಟ ಮಾಡುತ್ತಾಳೆ.

ರಾವಣನನ್ನು ಸಂಹರಿಸಿದ ನಂತರದಲ್ಲಿ ಶ್ರೀರಾಮನು ಸೀತೆಯನ್ನು ಕರೆತರಲು ಹನುಮಂತನಿಗೆ ಆಜ್ಞಾಪಿಸುತ್ತಾನೆ. ಸೀತೆಯು ರಾಮನಲ್ಲಿಗೆ ಬಂದು ಸೇರುವಾಗ ಅವಳಿಗೆ ಇಲ್ಲಿ ಅಗ್ನಿ ಪರೀಕ್ಷೆಯು ಕಾದಿರುತ್ತದೆ. ಆಗ ಶ್ರೀರಾಮ ಹೇಳುತ್ತಾನೆ–

**ಶ್ರೀ ಶ್ರೀನಿವಾಸ ಮಠದ,** ಬಿ ಎಸ್‌ಸಿ;

"ಹೇ ಸೀತೆಯೇ! ನೀನು ಕುಲೀನಳಾಗಿರಬಹುದು. ಆದರೂ ಪರಗೃಹ ವಾಸಿಯಾದವಳನ್ನು ಕುಲೀನನಾದವನು ಹೇಗೆ ಪರಿಗ್ರಹಿಸಿಯಾನು? ನಾನು ಎಲ್ಲಿಡೆಯಲ್ಲಿಯೂ ಅಭಿಮಾನವನ್ನು ಧರಿಸಿದವನು ನೀನು ನಿನ್ನ ಇಷ್ಟ ಬಂದ ತೆ ಹೋಗಬಹುದು" ಎನ್ನುತ್ತಾನೆ. ಆಗ ಸೀತೆಯು ನೋವಿನಿಂದ ಬಾಯಿಬಿಡುತ್ತ 'ಸರ್ವಥಾ ನನ್ನಲ್ಲಿ ಅನ್ಯಾಸಕ್ತಿ ಸ್ವಪ್ನದಲ್ಲೂ ಇಲ್ಲ'ವೆಂದು ಬಹು ರೀತಿಯಾಗಿ ಹೇಳುತ್ತಾಳೆ. ಹೀಗೆ ಹೇಳುವುದನ್ನು ಶ್ರೀರಾಮನು ಕೇಳಿದರೂ ಮೂಕಭಾವವನ್ನು ತೋರಿಸುತ್ತಿರಲು ಸೀತೆಯು ಲಕ್ಷ್ಮಣನಿಗೆ ಅಗ್ನಿಯನ್ನು ಸಿದ್ಧಮಾಡುವವನಾಗು – ಎನ್ನುತ್ತಾಳೆ. ಈ ಪರಿಸ್ಥಿತಿಯಲ್ಲಿ ಅವಳು ತುಸುವೂ ಧೃತಿಗೆಡಲಿಲ್ಲ.

ಲಕ್ಷ್ಮಣನು ಕಣ್ಣೀರು ಸುರಿಸುತ್ತಲೇ ಅಗಾಧವಾದ ಅಗ್ನಿಯನ್ನು ಸಿದ್ಧಮಾಡುತ್ತಾನೆ. ಆ ಸನ್ನಿವೇಶ ಎಂಥವರ ಮನವನ್ನೂ ಕರಗಿಸುವಂತಹದು. ಸೀತೆಯು ಸರ್ವ ಸಾಕ್ಷಿಯಾಗಿ "ನಾನು ಸರ್ವದಾ ಸ್ವಪ್ನದಲ್ಲಿಯೂ ಅನ್ಯಮನಸ್ಕಳಾಗದಿರುವುದು ಸತ್ಯವಾದ ಪಕ್ಷದಲ್ಲಿ ಪರೀಕ್ಷಕನಾದ ಅಗ್ನಿಯು ನನ್ನನ್ನು ಪಾಲಿಸಿ ಸಲಹಲಿ" ಎನ್ನುತ್ತಾ ಶ್ರೀರಾಮನನ್ನು ವಂದಿಸಿ ಧಗಿಧಗಿಸುವ ಅಗ್ನಿಯಲ್ಲಿ ಹಾರಿಬಿಡುತ್ತಾಳೆ. ಆಗ ಬ್ರಹ್ಮಾದಿದೇವತೆಗಳೆಲ್ಲರೂ ಶ್ರೀರಾಮನ ಬಳಿಗೆಬಂದು "ಹೇ ದೇವ! ಸೀತೆ ಪರಿಶುದ್ಧಳು. ನಿನ್ನ ಧರ್ಮಪತ್ನಿಯಾದ ಅವಳನ್ನು ಪರಿಗ್ರಹಿಸು" ಎಂದು ಹೇಳುತ್ತಾರೆ. ಸರ್ವಸಾಕ್ಷಿಯಾಗಿ ಸೀತೆ ಪತಿಯ ಕೈಹಿಡಿಯುತ್ತಾಳೆ. ಇದರಿಂದಾಗಿ ಸ್ತ್ರೀಯರ ಪಾತಿವ್ರತ್ಯದ ಮಹಿಮೆಯನ್ನು ಜಗತ್ತಿಗೆ ತೋರಿಸಿ ಕೊಡುತ್ತಾಳೆ.

ಮತ್ತೆ ಕೆಲಕಾಲದ ಗತಿಸಿದ ಮೇಲೆ ಒಂದು ದಿನ ರಜಕನೊಬ್ಬ "ಆಗಲಿರ್ದ ಮಡದಿಯಂ ಮತ್ತೆ ರಘುನಾಥನಂತೆ ಕೊಂಡಾಳುವವನಲ್ಲ ತಾನು" ಎನ್ನುತ್ತಾನೆ. ತನ್ನ ಗುಪ್ತಚಾರರಿಂದ ಈ ಮಾತನ್ನು ತಿಳಿದ

ಶ್ರೀರಾಮನ ಸೀತೆಯನ್ನು ಬಿಡುವುದೇ ಸರಿ ಎಂದು ಯೋಚಿಸುತ್ತಾನೆ. ಆಗ ತಮ್ಮಂದಿರಾದ ಲಕ್ಷ್ಮಣ, ಭರತ, ಶತ್ರುಘ್ನರು ತುಂಬಿದ ಬಸುರಿಯಾದ ಸೀತೆಯನ್ನು ಒಂಟಿಯಾಗಿ ಕಾಡಿನಲ್ಲಿ ಬಿಡುವದು ಒಳಿತಲ್ಲ ಬೇಡವೆನ್ನುತ್ತಾರೆ. ಮತ್ತೆ ಶ್ರೀರಾಮನು ಲಕ್ಷ್ಮಣನನ್ನು ಏಕಾಂತದಲ್ಲಿ ಕರೆದು ಅವಳನ್ನು ಕಾಡಿನಲ್ಲಿ ಬಿಟ್ಟು ಬರಲು ಹೇಳುತ್ತಾನೆ. ಲಕ್ಷ್ಮಣನಿಗೆ ದುಃಖ ಉಮ್ಮಳಿಸುತ್ತಿದೆ. ಅಣ್ಣನ ಆಜ್ಞೆಯನ್ನು ಮೀರಲಾರದೇ ಒಪ್ಪಿಕೊಂಡು ಅವಳನ್ನು ರಥದಲ್ಲಿ ಕೂಡಿಸಿಕೊಂಡು ಅಡವಿಯತ್ತ ನಡೆಯುತ್ತಾನೆ. ಸೀತೆಗೆ ಇದಾವುದೂ ಗೊತ್ತಾಗುವದೇ ಇಲ್ಲ ಅವಳು ತಪೋವನದ ಯಾತ್ರೆಗೆಂದು ಹಿಂದೊಮ್ಮೆ ಪತಿಯನ್ನು ಕೇಳಿಕೊಂಡಾಗ ಕಳಿಸುತ್ತೇನೆಂದು ಹೇಳಿದ ಮಾತನ್ನು ನೆನೆಸಿಕೊಂಡು ತುಂಬಾ ಹರ್ಷಗೊಂಡಿರುತ್ತಾಳೆ. ಆದರೆ ರಥವು ಮಹಾಟವಿಯನ್ನು ಪ್ರವೇಶಿಸಿದಾಗ ಅವಳು ಗಾಬರಿಯಾಗಿ "ಎಲ್ಲಿ ಮುನಿಪೋತ್ತಮರ ಪಾವನ ವನೆದೆಡೆಗಳು? ಎಲ್ಲಿ ಸಿದ್ಧಾಶ್ರಮಗಳ ಮಂಗಳ ಸ್ಥಳಗಳು ? ಎಲ್ಲಿ ಪರಿಚಿತವಾದ ವೇದ ಧ್ವನಿಗಳು ಎಲ್ಲಿಗೆ ಕರೆತಂದೆ? ಸೌಮಿತ್ರಿಯೇ" ಎನ್ನುತ್ತಾಳೆ. ಆಗ ಲಕ್ಷ್ಮಣನು ಕಂಬನಿ ಉಕ್ಕಿದವನಾಗಿ ಗದ್ಗದ ಕಂಠದಿಂದ ಕೂಡಿದವನಾಗಿ ಹೇಳುತ್ತಾನೆ. 'ತಾಯೇ! ಶ್ರೀರಾಮ ನಿನ್ನನ್ನು ಅಡವಿಯಲ್ಲಿ ಬಿಟ್ಟುಬಾ ಎಂದು ನೇಮಿಸಿದ ಪ್ರಯುಕ್ತವಾಗಿ ಆ ವಿಭುವಿನ ಆಜ್ಞೆಯನ್ನು ಮೀರದೇ ಇಲ್ಲಿಗೆ ಕರೆತಂದಿರುವೆ'ನೆಂದು ಬಿಕ್ಕಿ ಬಿಕ್ಕಿ ಅಳುತ್ತಾನೆ. ಆಗ "ಬಿರುಗಾಳಿ ಹೊಡೆಯಲ್ಕೆ ಫಲಿತ ಕದಳಿ ಮುರಿದಿಳೆಗೊರಗುವಂತೆ", ಆ ಲಕ್ಷ್ಮಣನ ಮಾತು ಕೇಳುತ್ತಲೇ ಸೀತೆಯು ಧರೆಗೆ ಬಿದ್ದು ಮೂರ್ಛೆ ಹೋಗುತ್ತಾಳೆ ನಂತರ ಲಕ್ಷ್ಮಣನು ತಣ್ಣೀರನ್ನು ತಂದು ಎಚ್ಚರಿಸುತ್ತಾನೆ. ಎಚ್ಚರಗೊಂಡ ಸೀತೆ ತನ್ನ ವಾಸಸ್ಥಳ ಅಡವಿಯೇ ಎಂಬುದಾಗಿ ನಿರ್ಧರಿಸಿಕೊಂಡವಳಾಗಿ ಲಕ್ಷ್ಮಣನಿಗೆ-- "ಏಕೆ ನಿಂದಿಹೆ ಪೋಗು ಸೌಮಿತ್ರಿ ಕೋಪಿಸನೆ? ನಿನಗೆ ಆ ಕಾಕುತ್ಸ್ಥನ, ಇಲ್ಲಿ ಉಗ್ರ ಜಂತುಗಳ ನೆರಪುಂಟು ಹೋಗು" ಎನ್ನುತ್ತಾಳೆ. ತನ್ನ ಜೀವನ ಸ್ಥಿತಿಯನ್ನು ನೆನಸಿಕೊಂಡವಳಾಗಿ, ಈ ಸ್ಥಿತಿ ಬಂದುದಕ್ಕೆ ಯಾರನ್ನು ದೂಷಿಸಿದೇ "ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ, ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿದ ಎನ್ನೊಳಪರಾಧ ಉಂಟು'' ಎನ್ನುತ್ತಾಳೆ. ನಂತರ ಲಕ್ಷ್ಮಣನನ್ನು ಬೀಳ್ಕೊಡುತ್ತಾ "ನಿನಗೆ ಹೆಜ್ಜೆ ಹೆಜ್ಜೆಗೂ ಸುಖವಾಗಲಿ'' ಎಂದು ಹರಿಸಿ ಕಳಿಸಿ ಕೊಡುತ್ತಾಳೆ. ಲಕ್ಷ್ಮಣನು ಅವಳನ್ನು ಕಾಡಿನಲ್ಲಿ ಬಿಟ್ಟು ಹೋದ ಮೇಲೆ ದುಃಖಿಸುತ್ತಾ ಎಲ್ಲಕಡೆಗೆ ಅಲೆಯುತ್ತಾಳೆ. ಪ್ರಾಣವನ್ನೇ ತೊರೆದು ಬಿಡುವ ಯೋಜನೆ ಮಾಡುತ್ತಾಳೆ. ಆದರೆ ಭ್ರೂಣಹತ್ಯಾ ದೋಷ ಬರುವುದೆಂಬ ಭೀತಿಯಿಂದ ಮತ್ತೆ ಮುನ್ನಡೆಯುತ್ತಾಳೆ. ಅವಳ ತನ್ನ ದುಃಖವನ್ನು ಹತ್ತಿಕ್ಕಿಕೊಳ್ಳುತ್ತಾ ನಡೆಯುತ್ತಿರವಾಗ, ಯಜ್ಞದ ಕಟ್ಟಿಗೆಗಳನ್ನು ತರಲು ಬಂದ ತಪೋಧನರಾದ ವಾಲ್ಮೀಕಿ ಮುನಿಗಳ ಸಮಾಗಮವಾಗುತ್ತಿದೆ. ಆಗ ಸೀತೆಗೆ ಹರುಷ, ಭಯ, ಲಜ್ಜೆಗಳು ಆವರಿಸುತ್ತವೆ. ಇಲ್ಲೇಕೆ ಅಲೆಯುವೆ ಎಂದು ಕೇಳಲು, ಅವಳು ಸ್ತ್ರೀಸಹಜ ಸ್ವಭಾವದಿಂದ ಕೂಡಿ ಗದ್ಗದ ಸ್ವರದಿಂದ 'ಲೋಕಾಪವಾದಕ್ಕೆ ಗುರಿಯಾಗಿ ಅಪರಾಧಿಯಲ್ಲದ ತನ್ನನ್ನು ಶ್ರೀರಾಮನು ಈ ಕಟ್ಟಡವಿಯಲ್ಲಿ ಬಿಟ್ಟಿರುತ್ತಾನೆ'' ಎಂದಾಗಿ ತಿಳಿಸುತ್ತಾಳೆ. ಆ ಋಷಿಗಳು ಕರುಣೆಯಿಂದ ಅವಳನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋಗಿ ಆಶ್ರಯ ಕೊಡುತ್ತಾರೆ. ಒಂದು ಶುಭಮುಹೂರ್ತದಲ್ಲಿ ಅವಳು ಲವಕುಶರಿಗೆ ಜನ್ಮ ಕೊಡುತ್ತಾಳೆ. ಆಗ ಅವಳ ಹರ್ಷಕ್ಕೆ ಪಾರವೇ ಇರಲಿಲ್ಲ. ಲವಕುಶರು ದೊಡ್ಡವರಾದ ಮೇಲೆ ಹನ್ನೆರಡನೇ ವರ್ಷದಲ್ಲಿ ಅವರಿಗೆ ವೇದೋಕ್ತ ಉಪನಯನವನ್ನು ಮಾಡುತ್ತಾರೆ. ಮುಂದೊಮ್ಮೆ ಶ್ರೀರಾಮನ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿ ಯುದ್ಧ ಮಾಡುತ್ತಾರೆ. ಶ್ರೀರಾಮನಿಂದ ಶ್ಲಾಘನೆ ಪಡೆಯುತ್ತಾರೆ. ವಾಲ್ಮೀಕಿ ಋಷಿಗಳು ಇವರು ಸೀತೆಯ ಅವಳಿ ಮಕ್ಕಳು ಎಂದಾಗಿ ತಿಳಿಸಿ ಕೊಡುತ್ತಾರೆ. ಮಕ್ಕಳ ಶೌರ್ಯವನ್ನು ಕಂಡು ಶ್ರೀರಾಮನು ಅವರನ್ನು ಮುದ್ದಾಡಿ ಬಿಗಿಯುವುತ್ತಾನೆ. ವಾಲ್ಮೀಕಿ – ಋಷಿಗಳು ಸೀತೆಯನ್ನು ರಾಮನ ವಶಕ್ಕೆ ಒಪ್ಪಿಸಿ ಅವಳು ಪರಿಶುದ್ಧಳೆಂಬುದನ್ನು ತಿಳಿಸಿಕೊಟ್ಟು ಎಲ್ಲರನ್ನೂ ಬೀಳ್ಕೊಡುತ್ತಾರೆ.

ಇಲ್ಲಿ ನಮಗೆ ಕಂಡು ಬರುವುದೇನೆಂದರೆ ಸೀತೆಯ ಕಷ್ಟ ಸಹಿಷ್ಣುತೆ. ಎಂತಹ ಹೃದಯ ಸೀಳುವ ಸಂದರ್ಭದಲ್ಲಿಯೂ ಸೀತೆ ರಾಮನ ವಿರುದ್ಧವಾಗಿ ಒಂದು ಮಾತನ್ನು ಆಡಿದವಳಲ್ಲ. ಹಾಗೆಂದು ಅವಳು ಕುರುಡು ನಂಬಿಕೆಯುವಳಾಗಿರಲಿಲ್ಲ. ಅವಳು ಧರ್ಮದ ಮರ್ಮವನ್ನು ಚೆನ್ನಾಗಿ ಅರಿತವಳು. ಅಂತೆಯೇ ಅವಳಿಗೆ ಶ್ರೀರಾಮನು ಒಮ್ಮೆಯೂ ಧರ್ಮತಪ್ಪಿ ನಡೆದನೆಂದು ಅನ್ನಿಸಲಿಲ್ಲ. ಆ ಕಾರಣದಿಂದಲೇ ಎಂದೂ ಅವಳು ಇದಿರು ಮಾತಾಡಲಿಲ್ಲ. ಧರ್ಮದ ಹಾದಿಯನ್ನು ಎಂದೂ ತಪ್ಪಲಿಲ್ಲ.

ಸೀತೆ ತನ್ನ ಜೀವನದ ಪತಿವ್ರತಾಧರ್ಮ ಆದರ್ಶ ನಾರಿ ಧರ್ಮ, ಕಷ್ಟ ಸಹಿಷ್ಣುತೆ-ಮುಂತಾದ ಉಜ್ವಲವಾದ ಜೀವನದ ಮೌಲ್ಯಗಳನ್ನು ತಿಳಿಸಿಕೊಟ್ಟು "ಪಂಚಕನ್ಯೆ'' ಯರ ಸಾಲಿನಲ್ಲಿ ದಿವ್ಯವಾದ ಸ್ಥಾನವನ್ನು ಗಳಿಸಿರುವಳೆಂಬುದು ಭಾರತೀಯರಾದ ನಮ್ಮೆಲ್ಲರಿಗೂ ಬಲುಹೆಮ್ಮೆಯ ವಿಷಯವಾಗಿದೆ. ★

(16ನೇ ಪುಟದಿಂದ)

ಜಯ ಜಯ ವೆಂಕಟರಮಣ |
ಜಯತು ಪನ್ನಗಶಯನ
ಜಯತು ಭಾರ್ಗವರಮಣ |
ಜಯ ಜಗದಾಧಾರ ‖ ಪ ‖
(ವೆಂಕಟರಮಣ)

ಸೂತ್ರನಾಮಕ ಸುಂದರನೇಕ |
ಸೂತ್ರನಾಮಕ ‖ ಪ ‖

ಸೂತ್ರನಾಮಕ ಸತ್ಪಾತ್ರ ಗರುಡ ಶಿಖಿ-
ನೇತ್ರ ವಿನುತ ಶುಭಗಾತ್ರ ಪವಿತ್ರ
| ಅ.ಪ |

ರಾಮ ಪದಾಬ್ಜ ಭೃಂಗ ರಾವಣ ಭಂಗ
ಕಾಮುಗಜ ಸಿಂಗ
ತಾಮಸ ಕುಲವನಧೂಮಕೇತು ಬುಧ
ಸೌಮನಸಾಗ್ರಣಿ ಕಾಮಿತ ಫಲದಾ ‖1‖

ಪಾಂಡುನಂದನ ಪಾಲಿಸೋ ಎನ್ನ
ಖಂಡ ಪಾವನ
ಅಂಡಜಾಧಿಪನ ಕಂಡು ಭಜಿಸಿದೋ
ದರ್ಡಂಡದಿ ಖಳಕುಳ ಪ್ರಚಂಡ ‖ 2 ‖

ಜ್ಞಾನದಾಯಕ ಆನಂದತೀರ್ಥ
ದೀನ ಪೋಷಕಾ
ಭಾನುಕೋಟಿ ತೇಜ (ವ್ಯಾಸವಿಠಲನ)
ಧ್ಯಾನದೊಳಿದು ಸ
(ದಾ) ನ್ಮಾನಸಹಂಸಾ ‖ 3 ‖
(ಹನುಮ, ಭೀಮ, ಮಧ್ವ)

ಎಂಬ ಪದಚಿತ್ರಗಳಲ್ಲಿ ಸ್ಪಷ್ಟವಾಗಿ ಕಂಡು ಕೊಳ್ಳಬಹುದಾಗಿದೆ. ಇಂತಹ ಸ್ತೋತ್ರ ಶಬ್ದ ಚಿತ್ರಗಳಲ್ಲಿ ಮನಸ್ಸಿಗೊಂದು ಏಕೋ ಭಾವ ದೊರೆಯುವುದಲ್ಲದೆ, ಪರಮಾತ್ಮನ ಅನುಗ್ರಹ ಪ್ರಾಪ್ತವಾಗುತ್ತದೆ.

ಹೀಗೆ ಸಾಧಕರಾದ ದಾಸರು ದೈವಾನುಗ್ರಹವನ್ನು ಸಂಪಾದಿಸಿ ಒಂದು ಮಟ್ಟಕ್ಕೆ ಬಂದ ಮೇಲೆ ಸಮಾಜವನ್ನು ಸೂಕ್ಷ್ಮವಾಗಿ ಅವಲೋಕಿಸಿ ಅದರಲ್ಲಿಯ ಕೊಳೆಯನ್ನೆಲ್ಲ ವಿಮರ್ಶಾತ್ಮಕವಾಗಿ ನೋಡಿ ಸಮಾಜದ ಶುಚಿ ಜೀವನಕ್ಕೆ ಬೇಕಾಗುವ ವಿಷಯಗಳನ್ನು ನೀಡಲು ಮುಂದೆ ಬರುತ್ತಾರೆ. ಈ ದಿಸೆಯಲ್ಲಿ ವ್ಯಾಸ ವಿಠಲರ ಈ ಕೆಳಗಿನ ಪದವನ್ನು ಇಲ್ಲಿ ಸಂಗ್ರಹಿಸಬಹುದು.

"ಹ್ಯಾಂಗೆ ಸುಮ್ಮನಿರಲಿ ಕಂಡು ಕಂಡು
ಹ್ಯಾಂಗೆ ಸುಮ್ಮನಿರಲಿ ವಿಠಲ | ಪ |
ಗುರುಹಿರಿಯ" ಸೇವೆಯ ಜರಿದು ಪರ
ಹರಿಯಾರಾಧನೆಯನೆ ಮರೆದು
ಕರಕರಿಪಡಿಸುವ ಕರ್ಣ ಪಿಶಾಚಿಯು
ವರಗಳಬೇಡುವ ದುರುಳಜನರ ಕಂಡು
‖ 1

ಎಲ್ಲ ಪದಾರ್ಥಗಳನೆ ಮಾಡಿ
ಎಲ್ಲಾಯಿಗೋಸುಗ ಎಡೆಮಾಡಿ
ಹೊಲ್ಲಿಯ ಜಾತಿಯ ಮಲ್ಲಿಯ ಕೂಡಿಸಿ
ಸಲ್ಲಿಸಿ ವಿಕ್ಕುದ ಮೆಲ್ಲುವವರ ಕಂಡು
‖ 2 ‖

ಬೇವಿನ ತೊಪ್ಪಲ ಬಿಗಿದುಟ್ಟು
ತೀವರವಲಿ ಮಧ್ಯವನ್ನಿಟ್ಟು
ದೇವಾರಿಗಳಿಗೆ ದೈನ್ಯದಿ ಬೇಡುತ
ಹೇಯವಿಲ್ಲದ ಜೀವಿಗಳನೆ ಕಂಡು ‖ 3 ‖

ಕಷ್ಟಗಳನು ಸೈರಿಸಬಹುದು
ನಿಷ್ಠುರ ವಚನವ ಕೇಳಬಹುದು.
ದುಷ್ಟ ಪಿಶಾಚಿಯ ಮುಟ್ಟಿ ಭಜಿಸುವಂಥ
ಬಿಟ್ಟಿಯ ಮಾಡುವ ಭ್ರಷ್ಟಜನರ ‖ 4 ‖

ಭೂಸುರ ಜನುಮದಲವತರಿಸಿ
ವಿಾಸಲು ಮಾರ್ಗವನನುಸರಿಸಿ
ವ್ಯಾಸವಿಠಲನ ದಾಸರೊಳಾಡುತ
ಕ್ಲೇಶವ ತೊಳೆಯದ
ದೋಷಿಗಳನೆ ಕಂಡು ‖ 5 ‖

ಈ ತರಹದ ಪದಗಳಿಂದ ಸಮಾಜ ವಿಮರ್ಶೆಯನ್ನು ಮಾಡಿ ಆ ಸಮಾಜವನ್ನು ತಮ್ಮ ಸಾತ್ವಿಕ ಜೀವನದ ಮೌಲ್ಯದ ಬೆಳಕಿನಲ್ಲಿ ಮೇಲಕ್ಕೆತ್ತುವ ಸಾಮರ್ಥ್ಯವನ್ನು ಪಡೆದ ವ್ಯಾಸವಿಠಲರು ಉಳಿದೆಲ್ಲ ದಾಸವರೇಣ್ಯರಂತೆ ಪರಮಾತ್ಮನೊಡನೆ ಆತ್ಮೀಯತೆಯನ್ನು ಬೆರೆಸಿ ಆತನಿಗೆ ತಾಯಿಯೋಪಾದಿಯಲ್ಲಿ ಲಾಲಿಹೇಳಿ "ತೂಗೇ ನೀ ಲಾಲಿಯ ಲಾಲಿಸಿದಿಯೊ ರಾಮಾ ತೊಟ್ಟಿಲೋಳ್ಮಲಗಿ ನಾಗಾರಿವಾಹನ ನತಜನ ಪ್ರೇಮಾ, ಸುರ ಸಾರ್ವಭೌಮಾ" ಎಂದು ಸ್ವಾಂತನ ಹೇಳುವ ಶಕ್ತಿಯನ್ನು ಪಡೆದ ಪ್ರಾತಃ ಸ್ಮರಣೀಯರಲ್ಲಿ ಒಬ್ಬರಾಗಿದ್ದಾರೆ. ಪಂಡಿತರಾಗಿದ್ದ ಇವರು, ವಿಜಯದಾಸರ ಅನುಗ್ರಹ ಪಡೆದ ಮೇಲೆ ತಮ್ಮ ಸಾಹಿತ್ಯದಲ್ಲಿ ಜನಹಿತವಾದ ಸರಳ ದೇಸೀ ಭಾಷೆಯನ್ನೇ ಬಳಸಿ ತಮ್ಮ ಪಾಂಡಿತ್ಯವನ್ನು ಮೃದುವಾಗಿರಿಸಿ ಎಲ್ಲರ ಸೊತ್ತನ್ನಾಗಿರಿಸಿದ ಮಹಾಮಹಿಮರಲ್ಲಿ ಇವರು ಶ್ರೇಷ್ಠರಾಗಿದ್ದಾರೆ. ಹೀಗೆ ವ್ಯಾಸವಿಠಲರ ಬದುಕು ಬರಹಗಳು ದಾಸ ಸಾಹಿತ್ಯದಲ್ಲಿ ಶಾಶ್ವತವಾದ ಹೆಜ್ಜೆಗಳನ್ನು ಮೂಡಿಸಿ ವಿದ್ಯೆಗೆ ವಿನಯ, ಬದುಕಿಗೆ ಸಹಜತೆಗಳು ಭೂಷಣವೆಂದು ಸಾರುತ್ತ ಶಾಶ್ವತವಾಗಿ ನಿಂತಿವೆ.



# ಶ್ರೀ ವೇಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೇಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೇಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಆಡಳಿತ ನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

([illegible]ನೇ ಪುಟದಿಂದ)

ಇತರ ಈತಿಬಾಧೆಗಳಾಗಲಿ ಇರಬಾರದು. ನಾನಾ ರೀತಿಯ ಗಣಿಯ ಕೆಲಸಗಳು ನಡೆಯುತ್ತಿರಬೇಕು. ದೇಶದಲ್ಲಿ ಪಾಪಬುದ್ಧಿಗಳಾರೂ ಇರಕೂಡದು. ಕೃಷಿ ಗೋರಕ್ಷಣೆಯಿಂದ ಜೀವಿಸುವ ವೈಶ್ಯರಿಗೆ ಎಲ್ಲ ಸೌಕರ್ಯವೂ ಇರಬೇಕು. ವಾಣಿಜ್ಯವೃತ್ತಿಯವರ ಹಿತವನ್ನು ಕಾಪಾಡಿ ಅವರು ಅಭಿವೃದ್ಧಿಗೆ ಬರುವಂತಿರಬೇಕು. ಸಮಸ್ತ ಪ್ರಜೆಗಳನ್ನು ಧರ್ಮದಿಂದ ರಕ್ಷಿಸುವುದು ರಾಜನ ಕರ್ತವ್ಯ. ಅಂತಃಪುರ ಸ್ತ್ರೀಯರಿಗೆ ಅನುಕೂಲವಾಗಿದ್ದು ಅವರನ್ನು ಸಂತೈಸುತ್ತಿರಬೇಕು. ಅವರಿಗೆ ದುಷ್ಟರ ಸಂಪರ್ಕವೇರ್ಪಡದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರಬೇಕು. ವಿಮರ್ಶೆಯಿಲ್ಲದೆ ಸ್ತ್ರೀಯರ ಮಾತನ್ನು ನಂಬಬಾರದು. ಅವರಿಗೆ ಗೋಪ್ಯವಾದ ಮಾತನ್ನು ಕೇಳಿಸಬಾರದು. ಆನೆಗಳು ದೊರೆಯುವ ಅರಣ್ಯವನ್ನು ರಕ್ಷಿಸಬೇಕು. ಕಾಡಾನೆಗಳನ್ನು ಹಿಡಿಯಲು ಸಾಕಷ್ಟು ಹೆಣ್ಣಾನೆಗಳನ್ನು ಸಾಕಬೇಕು. ಕುದುರೆ ಮತ್ತು ಹೆಣ್ಣಾನೆ ಸಾಕಷ್ಟಿವೆಯೆಂದು ರಾಜನು ತೃಪ್ತಿಯಿಂದಿರಬಾರದು.

ಪ್ರತಿದಿನವೂ ರಾಜನು ಅಲಂಕಾರಮಾಡಿಕೊಂಡು ಪ್ರಜೆಗಳಿಗೆ ದರ್ಶನವನ್ನು ಕೊಡಬೇಕು. ಸೇವಕರು ನಿರ್ಭಯವಾಗಿ ಎದುರಿಗೆ ಬಂದು ನಿಲ್ಲುವಷ್ಟು ಸಲಿಗೆಯನ್ನು ಕೊಡಬಾರದು. ಹತ್ತಿರವೇ ಸುಳಿಯದೇ ದೂರಕ್ಕೆ ತೊಲಗುವಂತೆ ಭಯವನ್ನು ಉಂಟುಮಾಡಬಾರದು. ಅವರ ವಿಷಯದಲ್ಲಿ ಹೆಚ್ಚು ಸಲಿಗೆಯೂ ಸಲ್ಲದು ಹೆಚ್ಚು ಕ್ರೌರ್ಯವೂ ಕೂಡದು. ಮಧ್ಯವರ್ತಿಯಾಗಿರಬೇಕು. ದೇಶದಲ್ಲಿ ಧನಧಾನ್ಯ ಜಲಸಮೃದ್ಧಿ ಸಾಕಷ್ಟಿರಬೇಕು. ಅವುಗಳು ಯಂತ್ರಗಳಿಂದಲೂ ಶಿಲ್ಪಿಗಳಿಂದಲೂ ಆಯುಧಗಳಿಂದಲೂ ಧನುರ್ಧಾರಿಗಳಿಂದಲೂ ಸಮೃದ್ಧವಾಗಿರಬೇಕು. ಆದಾಯವು ಅಧಿಕವಾಗಿ ವ್ಯಯಕ್ಕಿಂತ ಕಡಿಮೆಯಾಗಿರಬೇಕು. ಭಂಡಾರವು ಅಯೋಗ್ಯರಿಗಾಗಿ ವಿನಿಯೋಗವಾಗಬಾರದು: ದೇವತೆಗಳು, ಪಿತೃಗಳು, ಬ್ರಾಹ್ಮಣರು, ಅತಿಥಿಗಳು, ಸೈನಿಕರು ಮಿತ್ರರು ಇವರಿಗೋಸ್ಕರ ಧನವು ವ್ಯಯವಾಗಬೇಕು. ಶ್ರದ್ಧಾತ್ಮರಾದ ಸಾಧು ಪುರುಷರು ದುಷ್ಕೃತ್ಯವನ್ನು ಮಾಡಿರುವರೆಂಬ ಅಪಾದನೆ ಗುರಿಯಾಗುವುದುಂಟು. ಅಂಥ ಸಮಯದಲ್ಲಿ ಅವನು ಅಪರಾಧಿಯೆಂದು ಧರ್ಮಶಾಸ್ತ್ರಜ್ಞರೂ ನಿರ್ಣಯಿಸಿದ್ದರೂ ಆ ನಿರಪರಾಧಿಯನ್ನು ಲೋಭವಶರಾಗಿ ಅಧಿಕಾರಿಗಳು ದಂಡಿಸಲಾಗದು. ಕದಿಯುವ ಕಾಲದಲ್ಲಿಯೇ ಸಿಕ್ಕಿಬಿದ್ದ ಕಳ್ಳನನ್ನು ನ್ಯಾಯಾಲಯದಲ್ಲಿ ಪ್ರಶ್ನೆ ಮಾಡಿ ಅವನು ಕಳ್ಳನೆಂದು ನಿರ್ಧರಿಸಿರುತ್ತಾರೆ. ಅಂಥ ಕಳ್ಳನಿಗೆ ಲಂಚದಾಸೆಯಿಂದ ಬಿಡುಗಡೆಯಾಗಬಾರದು. ಶ್ರೀಮಂತನಿಗೂ ಬಡವನಿಗೂ ಯಾವು[illegible] ವಿಶಾಲ ವೃಕ್ಷ [illegible] [illegible] ಆಗ [illegible] ವಿಜ್ಞಪ್ತಿ[illegible] ವಾದ ವಿವಾದವನ್ನು ಬಗೆಹರಿಸಬೇಕು. [illegible] ಅಪಾದನೆಗೆ ಒಳಗಾಗಿ ಪ್ರಜೆಗಳು ಕಷ್ಟದಲ್ಲಿ ಕಣ್ಣೀರು ಬಿಡುವಂತಾಗಬಾರದು. ಪ್ರಜೆಗಳ ಕಣ್ಣೀರು ರಾಜನ ಸಂತತಿಯನ್ನು ಪಶುಸಹಿತವಾದ ಸಂಪತ್ತನ್ನು ನಾಶಮಾಡುತ್ತದೆ. ಮುದುಕರಿಗೂ ರೋಗಿಗಳಿಗೂ ವೈದ್ಯರಿಗೂ ಇಷ್ಟ ವಸ್ತುಗಳನ್ನು ಕೊಟ್ಟು ಅವರೊಡನೆ ಸ್ನೇಹಭಾವದಿಂದ ವರ್ತಿಸಬೇಕು. ಗುರುಹಿರಿಯರು, ತಪಸ್ವಿಗಳು, ದೇವತೆಗಳು, ಅತಿಥಿಗಳು, ದೇವತಾವಾಸಸ್ಥಳಗಳಾದ ವೃಕ್ಷಗಳು, ಯಾಗಾದಿಗಳಿಂದ ಕೃತಕೃತ್ಯರಾದ ಬ್ರಾಹ್ಮಣರು ಇವರನ್ನು ಕಂಡಾಗ ನಮಸ್ಕರಿಸಬೇಕು. ಧನಾರ್ಜನೆಯಲ್ಲಿ ಆಸಕ್ತನಾಗಿ ಧರ್ಮಕ್ಕೆ ಹಾನಿ ತರಬಾರದು. ಹಾಗೆಯೇ ಧರ್ಮಾರ್ಜನೆಯಲ್ಲಿ ಮಾತ್ರ ನಿರತನಾಗಿ ಧನ ಸಂಪಾದನೆಗೆ ಅಡ್ಡಿಯನ್ನು ತಂದುಕೊಳ್ಳಬಾರದು. ಸುಖಾಭಿಲಾಷೆಯಿಂದ ಕಾಮದಲ್ಲಿಯೇ ತೊಡಗಿ ಧರ್ಮಾರ್ಥಗಳೆರಡಕ್ಕೂ ಬಾಧೆಯನ್ನು ತಂದುಕೊಳ್ಳಬಾರದು. ರಾಜನು ಕಾಲದ ಬೆಲೆಯನ್ನು ಅರಿತಿರಬೇಕು. ಧರ್ಮಾರ್ಥಕಾಮಗಳನ್ನು ಯುಕ್ತ ಕಾಲದಲ್ಲಿ ಔಚಿತ್ಯವನ್ನರಿತು ಸೇವಿಸಬೇಕು. ಸರ್ವ ಶಾಸ್ತ್ರಗಳಲ್ಲಿಯೂ ಪಾರಂಗತರಾದ ಬ್ರಾಹ್ಮಣರೂ ಪೌರರೂ ಪ್ರಜೆಗಳೂ ರಾಜನ ಶ್ರೇಯಸ್ಸನ್ನು ಕೋರುವವರಾಗಿರಬೇಕು. ರಾಜನಲ್ಲಿ ಸಂಭವಿಸಬಹುದಾದ ದೋಷಗಳಾವುವೆಂದರೆ – ನಾಸ್ತಿಕ ಬುದ್ಧಿ, ಸುಳ್ಳು, ಸಿಟ್ಟು, ಅನವಧಾನ, ಚಟುವಟಿಕೆಯಿಲ್ಲದೆ ಕಾರ್ಯವನ್ನು ತಡಮಾಡುವುದು. ಪ್ರಾಜ್ಞರಾದ ಸಜ್ಜನರೊಡನೆ ಸೇರದಿರುವುದು, ಸೋಮಾರಿತನ, ಪಂಚೇಂದ್ರಿಯಗಳಿಗೆ ಅಧೀನನಾಗಿ ಇಂದ್ರಿಯ ಚಾಪಲ್ಯದಲ್ಲಿ ಮುಳುಗುವುದು, ಮಂತ್ರಿಗಳೊಡನೆ ಸಮಾಲೋಚಿಸದೇ ರಾಜಕಾರ್ಯಗಳಲ್ಲಿ ತಾನೊಬ್ಬನೇ ನಿರ್ಧಾರ ತೆಗೆದುಕೊಳ್ಳುವುದು, ಅನುಭವವಿಲ್ಲದ ಅವಿವೇಕಿಗಳೊಡನೆ ಸಮಾಲೋಚಿಸುವುದು, ನಿಶ್ಚಯಿಸಿದ ಕಾರ್ಯವನ್ನು ಆರಂಭಿಸದಿರುವುದು, ಮಂತ್ರಾಲೋಚನೆಯನ್ನು ರಹಸ್ಯವಾಗಿರಿಸದೇ ಬಹಿರಂಗಪಡಿಸುವುದು, ಹಾಗೆಯೇ ಮಂಗಳಕಾರ್ಯವನ್ನು ಮಾಡದಿರುವಿಕೆ, ಎಲ್ಲ ಶತ್ರುಗಳ ಮೇಲೂ ಏಕಕಾಲದಲ್ಲಿ ಯುದ್ಧಾರಂಭಮಾಡುವುದು–ಈ ಹದಿನಾಲ್ಕು ರಾಜದೋಷಗಳಿಗೆ ಅವಕಾಶ ಕೊಡದಿರುವುದು ಇವುಗಳ ಸ್ವರೂಪ ಹೀಗಿದೆ – ದಶವರ್ಗ (ಬೇಟೆ, ಜೂಜು, ಹಗಲುನಿದ್ರೆ, ಪರರ ದೋಷವನ್ನು ಆಡಿಕೊಳ್ಳುವುದು, ಹೆಂಗಸರ ವ್ಯಾಮೋಹ, ಮದ್ಯಪಾನದ ಮದ, ನೃತ್ಯ, ಗೀತ, ವಾದ್ಯ, ನಿಷ್ಫಲವಾದ ಸಂಚಾರ), ಪಂಚವರ್ಗ (ಸವತಿತಾಯಿಯಿಂದಾದದ್ದು, ದ್ರವ್ಯನಿಮಿತ್ತಕ, ಸ್ತ್ರೀಹೇತುಕ, [illegible], ಅಪರಾಧ ಜನ್ಯ), ಚತುರ್ವರ್ಗ (ಸಾಮ, ದಾನ, ಭೇದ, ದಂಡ) ತ್ರಿವರ್ಗ (ಧರ್ಮ, ಅರ್ಥ, ಕಾಮ) ಷಡ್ಗುಣಗಳು (ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯ) ದೈವವ್ಯಸನ, ಮಾನುಷವ್ಯಸನ, ಭೇದಕೃತ್ಯ, ವಿಂಶತವರ್ಗ, ಪಂಚಪ್ರಕೃತಿಗಳು, ದ್ವಾದಶಮಂಡಲಗಳು, ಮತ್ತು ದಂಡಯಾತ್ರಾ ವಿಧಾನ, [illegible] ಎರಡೆರಡು ಗುಣಗಳಿಗೆ ಕಾರಣವಾದ ಸಂಧಿ ವಿಗ್ರಹಗಳು – ಇವುಗಳಲ್ಲಿ ಯಾವುದನ್ನು ಯಾವಾಗ ಸ್ವೀಕರಿಸಬೇಕು ಎಂಬ ತಾರತಮ್ಯಗಳನ್ನು ತಿಳಿದು ನಡೆಯಬೇಕು. ನೀತಿಶಾಸ್ತ್ರೋಕ್ತವಾದ ಅರ್ಹತೆಯುಳ್ಳ ಮೂರುನಾಲ್ಕು ಮಂತ್ರಿಗಳೊಡನೆ ಮೊದಲು ರಾಜಕಾರ್ಯವನ್ನು ಸಮಾಲೋಚಿಸಬೇಕು. ಅನಂತರ ಒಬ್ಬೊಬ್ಬರನ್ನಾಗಿ ಕರೆಸಿ ಪ್ರತ್ಯೇಕವಾಗಿ ಅವರ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕು. ರಾಜನು ಅಧ್ಯಯನ ಮಾಡಿದ ವೇದಗಳನ್ನು ಅನುಷ್ಠಾನದಿಂದ ಸಫಲಗೊಳಿಸಬೇಕು. ಅವನ ಕಾರ್ಯಗಳು ಉದ್ದಿಷ್ಟ ಫಲವನ್ನು ಕೊಡುವಂತಾಗಬೇಕು. ಪತ್ನಿಯಿಂದ ನಿರೀಕ್ಷಿತವಾದ ಫಲವು ಸಂತತಿ. ಅದು ಮೊದಲು ದೊರೆಯಬೇಕು.

ಈ ಮೇಲೆ ಹೇಳಿದ ಕಾರ್ಯರೀತಿಯಿಂದ ಕೆಲಸ ಮಾಡುವುದು ಆಯುಷ್ಕರ, ಯಶಸ್ಕರ, ಧರ್ಮಾರ್ಥ ಸಿದ್ಧಿದಾಯಕ. ಹಿರಿಯರ ಮಾರ್ಗದಲ್ಲಿ ನಡೆಯುವುದೇ ಸನ್ಮಾರ್ಗ, ಶ್ರೇಯಸ್ಕರ. ರುಚಿಕರವಾದ ಮೃಷ್ಟಾನ್ನವನ್ನು ಒಬ್ಬನೇ ಭುಜಿಸಬಾರದು. ಗೆಳೆಯರಿಗೆ ಬೇಕಾದ್ದನ್ನು ಕೊಟ್ಟು ಸಹಾಯಮಾಡಬೇಕು. ಬುದ್ಧಿಶಾಲಿಯಾದ ರಾಜನು ದಂಡಧಾರಿಯಾಗಿ ಧರ್ಮದಿಂದ ಪ್ರಜೆಗಳನ್ನು ಪಾಲಿಸಬೇಕು. ಅವನಿಗೆ ಸಮಸ್ತ ರಾಷ್ಟ್ರಗಳು ವಶವಾಗುತ್ತವೆ. ಪರಲೋಕದಲ್ಲಿ ಸದ್ಗತಿಯುಂಟಾಗುತ್ತದೆ.



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಛತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

  ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

  ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

## ಕಿಶೋರ ಜಗತ್

# ಧರ್ಮದ ಶಿಕ್ಷಣ

ಜಾಜಲಿ ಎನ್ನುವ ಓರ್ವ ಋಷಿ ಇದ್ದ. ಅವನು ಮಹಾನ್ ತಪಸ್ವಿ ಆಗಿದ್ದ. ಘೋರ ತಪಸ್ಸನ್ನು ಮಾಡುತ್ತಿದ್ದನು. ಅವನ ತೇಜಸ್ಸಿಗೆ ಸಮಾನರ್‍ಯಾರೂ ಇರಲಿಲ್ಲ. ಮಳೆಗಾಲದಲ್ಲಿ ಹೊರಗಡೆ ಮಲಗುತ್ತಿದ್ದ. ಹೇಮಂತ ಋತುವಿನಲ್ಲಿ ನೀರಿನ ಮಧ್ಯೆ ಕುಳಿತಿರುತ್ತಿದ್ದ. ಗ್ರೀಷ್ಮ ಋತುವಿನಲ್ಲಿ ಬಿಸಿಲಿನಲ್ಲಿ ನಿಂತಿರುತ್ತಿದ್ದ. ಆದರೂ ಅವನಿಗೆ ಧರ್ಮದ ನಿಜವಾದ ಅರ್ಥ ಹೊಳೆದಿರಲಿಲ್ಲ.

ಅವನ ದೇಹ ಸದಾ ನೆನೆದಿರುತ್ತಿತ್ತು ಹಾಗೂ ಕೊಳೆಯಿಂದ ತುಂಬಿರುತ್ತಿತ್ತು. ನಿರಾಹಾರನಾಗಿದ್ದುದರಿಂದ ಅವನ ದೇಹವು ಕಡ್ಡಿಯಂತಾಗಿತ್ತು.

ಆಗ ಒಂದು ಪಕ್ಷಿ ದಂಪತಿಗಳು ಅವನ ಜಟೆಯಲ್ಲಿ ಒಂದು ಗೂಡನ್ನು ನೇಯ್ದು ವಾಸಮಾಡ ತೊಡಗಿದವು. ಆ ಪಕ್ಷಿಗಳನ್ನು ಅಲ್ಲಿಂದ ಓಡಿಸಲು ಇಷ್ಟಪಡಲಿಲ್ಲ. ಕೆಲವು ದಿನಗಳಾದ ಮೇಲೆ ಹೆಣ್ಣು ಹಕ್ಕಿಯು ಮೊಟ್ಟೆಗಳನ್ನು ಇಟ್ಟಿತು. ಅದು ಅವನಿಗೆ ಗೊತ್ತಾಯಿತು. ಆದರೆ ಅವುಗಳಿಗೆ ಯಾವ ಅಡ್ಡಿಯನ್ನೂ ಉಂಟು ಮಾಡಲಿಲ್ಲ. ಮೊಟ್ಟೆಗಳು ಒಡೆದು ಪುಟ್ಟ ಮರಿಗಳು ಹೊರಬಂದವು. ಇದು ಋಷಿಗೆ ತುಂಬಾ ಸಂತೋಷವನ್ನು ಉಂಟು ಮಾಡಿತು. ಮರಿಗಳು ಬೆಳೆದು ದೊಡ್ಡವುಗಳಾದವು. ಆದರೂ ಋಷಿಯು ಚಲಿಸಲಿಲ್ಲ. ದೊಡ್ಡವಾದ ಮರಿಗಳು ತಂದೆ. ತಾಯಿ ಪಕ್ಷಿಗಳೊಂದಿಗೆ ಆಕಾಶದಲ್ಲಿ ಹಾರಿದಾಗಲಂತೂ ಋಷಿಗೆ ಬಹಳಷ್ಟು ಆನಂದವಾಯಿತು.

ಒಮ್ಮೆ ಹೀಗೆ ಹಾರಿಹೋದ ಗೂಡಿನ ಯಾವ ಪಕ್ಷಿಯೂ ಮತ್ತೆ ಹಿಂತಿರುಗಲಿಲ್ಲ. ಜಾಜಲಿಯೂ ಅಲ್ಲಿಂದ ಬೇರೆಡೆಗೆ ಹೊರಟು ಹೋದ.

ಪಕ್ಷಿಗಳು ತನ್ನಲ್ಲಿ ವಾಸಮಾಡುತ್ತಿದ್ದುದನ್ನು ನೆನೆದು, ಅವುಗಳಿಗೆ ತಾನು ಉಪಕಾರ ಮಾಡಿದೆನೆಂದು ಭಾವಿಸಿಕೊಂಡು ತನ್ನನ್ನು ತಾನೇ ಮಹಾನ್ ಧರ್ಮಾತ್ಮನೆಂದು ಕೊಂಡ ಆ ಋಷಿ.

ಆಗ ಅಶರೀರವಾಣಿಯೊಂದು ಕೇಳಿಬಂದಿತು –

"ಧರ್ಮದ ಕಾರ್ಯಗಳಲ್ಲಿ ನೀನು ತುಲಾಧಾರನಿಗೆ ಸಮನಾಗಿಲ್ಲ. ವಾರಣಾಸಿಗೆ ಹೋಗಿ. ಅಲ್ಲಿ ವ್ಯಾಪಾರ ವೃತ್ತಿಯನ್ನು ಕೈಗೊಂಡಿರುವ ತುಲಾಧಾರನಿಂದ ಧರ್ಮದ ಬಗ್ಗೆ ಶಿಕ್ಷಣವನ್ನು ಪಡೆ ..."

ಅದರಂತೆ ಜಾಜಲಿಯು ವಾರಣಾಸಿಯನ್ನು ತಲುಪಿದ. ಅಲ್ಲಿ ವ್ಯಾಪಾರದಲ್ಲಿ ತಲ್ಲೀನನಾಗಿದ್ದ ತುಲಾಧಾರನನ್ನು ನೋಡಿದ.

ಜಾಜಲಿಯನ್ನು ನೋಡಿದಾಗ. ಅವನನ್ನು ಸ್ವಾಗತಿಸಿದ ತುಲಾಧಾರನು ಹೇಳಿದನು.

"ತಾವಿಷ್ಟು ಘೋರ ತಪಸ್ಸನ್ನು ಮಾಡಿಯೂ, ತಮ್ಮ ಜಟಾ ಜೂಟದಲ್ಲಿ ಪಕ್ಷಿಗಳು ವಾಸ ಮಾಡಿಕೊಂಡಿದ್ದೂ ತಾವು ವಿಚಲಿತರಾಗದೇ ಇದ್ದುದು ಮಹಾನ್ ಸಾಧನೆಯೇ ಸರಿ ಆದರೆ ಒಂದು ಲೋಪವಿದೆ. ನಿಮಗೆ ಧರ್ಮಜ್ಞರೆಂಬ ಗರ್ವವಿದೆ. ಅಶರೀರವಾಣಿಯು ಧ್ವನಿಯನ್ನು ಆಲಿಸಿ, ನೀವಿಲ್ಲಿಗೆ ಬಂದಿದ್ದೀರಿ. ... ನಾನು ತಮಗೆ ಯಾವ ರೀತಿಯ ಸೇವೆಯನ್ನು ಸಲ್ಲಿಸಲಿ?"

ಇದನ್ನು ಆಲಿಸಿದ ಜಾಜಲಿಗೆ ಬಹಳ ಆಶ್ಚರ್ಯವಾಯಿತು. ವ್ಯಾಪಾರಸ್ಥನಾಗಿರುವ ಈ ವ್ಯಕ್ತಿಗೆ ಈ ವಿಷಯಗಳೆಲ್ಲ ತಿಳಿದು ಬಂದ ರೀತಿಯಾದರೂ ಹೇಗೆ? ಎಂದುಕೊಂಡ. ಅವನು ಕೇಳಿದ.

"ನಿನಗೆ ಈ ಧರ್ಮಬುದ್ಧಿ ಎಲ್ಲಿಂದ, ಹೇಗೆ ಪ್ರಾಪ್ತವಾಯಿತು? ನೀನೊಬ್ಬ ವ್ಯಾಪಾರಿಯಾಗಿರುವೆ. ನನಗೆ ನಿನ್ನ ಧರ್ಮದ ರಹಸ್ಯವನ್ನು ತಿಳಿಸು".

ತುಲಾಧಾರನು ಧರ್ಮದ ರಹಸ್ಯವನ್ನು ಬಿಚ್ಚಿ ತೋರಿಸುವ ರೀತಿಯಲ್ಲಿ ವಿಚಾರಗಳನ್ನು ಹೇಳತೊಡಗಿದ.

"ಎಲ್ಲ ಪ್ರಾಣಿಗಳ ಹಿತವನ್ನು ರಕ್ಷಿಸುವವನು, ಎಲ್ಲರೊಂದಿಗೆ ಮಿತ್ರತ್ವ ಭಾವವನ್ನು ಹೊಂದಿರುವವನು ಅವನೇ ನಿಜ ಅರ್ಥದಲ್ಲಿ ಧರ್ಮಜ್ಞನಾಗಿರುವನು."

"ಯಾವ ಪ್ರಾಣಿಯೊಂದಿಗೂ ದ್ರೋಹ ಮಾಡಬಾರದು. ಇದೇ ರೀತಿಯಲ್ಲಿ ನಾನು ಜೀವನ ನಿರ್ವಹಣೆ ಮಾಡುತ್ತಿದ್ದೇನೆ. ಚಿನ್ನ ಬೆಳ್ಳಿಗಳನ್ನು ಕೊಂಡು, ಮಾರುವೆನು. ನಾನು ಮದಿರಾ ಇತ್ಯಾದಿಗಳನ್ನು ಕುಡಿಯುವುದಿಲ್ಲ. ಮಾರುವುದರಲ್ಲಿ ಕಪಟ, ಅಸತ್ಯಗಳನ್ನು ಅನುಸರಿಸಬಾರದು. ಎಲ್ಲರನ್ನೂ ನನ್ನ ಸಹೃದಯರೆಂದೇ ಭಾವಿಸುತ್ತೇನೆ. ಸರ್ವರಿಗೂ ಒಳ್ಳೆಯದನ್ನು ಮಾಡುವುದರಲ್ಲಿ ತಲ್ಲೀನನಾಗಿರುತ್ತೇನೆ. ವಸ್ತುಗಳನ್ನು ತೂಗುವಿಕೆಯು ಎಲ್ಲರ ವಿಷಯದಲ್ಲೂ ಒಂದೇ ಸಮನಾಗಿರುತ್ತದೆ. ಯಾರೊಂದಿಗೂ ಭೇದಭಾವವನ್ನು ತೋರುವುದಿಲ್ಲ.

ಯಾವುದೇ ವಿಚಾರದಲ್ಲಿಯು ಅನಗತ್ಯ ಆಸಕ್ತಿಯನ್ನು ತೋರುವುದಿಲ್ಲ, ಅನಾಸಕ್ತನಾಗಿರುತ್ತೇನೆ. ಯಾರನ್ನೂ ವ್ಯರ್ಥ ಪ್ರಶಂಸೆ ಮಾಡುವುದಿಲ್ಲ, ಯಾರನ್ನೂ ಬಯ್ಯುವುದಿಲ್ಲ. ಇಂದ್ರಿಯ ವಿಷಯಗಳಲ್ಲಿ ನನ್ನ ಮನಸ್ಸು ಮಗ್ನವಾಗುವುದಿಲ್ಲ. ಎಲ್ಲರಿಗೂ ಅಭಯ ಪ್ರದಾನ ಮಾಡುತ್ತಿರುವೆನು. ಅಭಯ ನೀಡುವವರೇ ನಿರ್ಭಯರಾಗಿರುವರು. ಆದುದರಿಂದ ಸದಾ ಕಾಲದಲ್ಲೂ ಅಭಯದಾನವನ್ನು ಆಚರಿಸುತ್ತಿರಬೇಕು ಅದರಿಂದ ಪರಬ್ರಹ್ಮ ಪ್ರಾಪ್ತವಾಗುತ್ತದೆ. ಅದಕ್ಕಿಂತ ಮಿಗಿಲಾದ ಯಜ್ಞ ವಿಲ್ಲ

"ಜಗತ್ತಿನ ಎಲ್ಲ ಜೀವಿಗಳನ್ನೂ ತನ್ನ ಸಮಾನರಂತೆ ಕಾಣಬೇಕು. ಪರಕೀಯರೆನ್ನುವವರು ಯಾರೂ ಇಲ್ಲ. ಅಂಥಾನು

'ರಘುಸುತ'

ಕರಣೆ, ಮೂಢನಂಬಿಕೆಗಳನ್ನು ಯಾವತ್ತೂ ಅನುಸರಿಸಬಾರದು. ತನ್ನ ಆತ್ಮವನ್ನು ಪ್ರತಿಯೊಬ್ಬನೂ ಶುದ್ಧನಾಗಿರಿಸಿಕೊಂಡು ವಿವೇಕ ಪೂರ್ಣವಾಗಿ ಸತ್ಕರ್ಮಗಳನ್ನು ಮಾಡಬೇಕು. ಧರ್ಮದ ಸಿದ್ಧಿಯು ಏಕ ಮಾತ್ರ ಮಾರ್ಗವೆಂದರೆ ಯಾವ ಜೀವಿಗೂ ಹಿಂಸೆ ಕೊಡಬಾರದು. ಸತ್ಕಾಮ ಕರ್ಮ ವನ್ನು ಆಚರಿಸುವುದರಿಂದ ಉತ್ತಮ ಫಲ ಗಳು ಲಭಿಸುತ್ತವೆ. ಆದರೆ ಈ ಫಲಗಳು ಕ್ಷೀಣಿಸುವುದೂ ಉಂಟು. ಆದ್ದರಿಂದ ನಿಷ್ಕಾಮ ಕರ್ಮವನ್ನು ಅನುಸರಿಸುವುದು ಒಳ್ಳೆಯದು ...

ಜಾಜಲಿ ಮುನಿಯು ಕೇಳಿದ,

"ವ್ಯವಸಾಯ ಮಾಡುವುದರಿಂದ, ಭೂಮಿ ಯನ್ನು ಉತ್ತು, ಬಿತ್ತು ಮಾಡುವುದರಿಂದ ಜೀವಿಗಳು ನಾಶವಾಗುತ್ತವೆ. ಕೃಷಿ ಮಾಡ ದಿದ್ದಲ್ಲಿ ಭತ್ತ ಬೆಳೆಯಲಾಗುವುದಿಲ್ಲ. ಅದಿಲ್ಲ ದಿದ್ದಲ್ಲಿ ಮನುಷ್ಯ ಜೀವಿಸಿರುವುದು ಹೇಗೆ? ಅಹಿಂಸೆಯನ್ನು ಅನುಸರಿಸುವುದು ಹೇಗೆ?

ತುಲಾಧಾರನು ಉತ್ತರಿಸಿದ,

"ನಾನು ನಾಸ್ತಿಕನಲ್ಲ. ಯಜ್ಞದ ನಿಂದೆ ಯನ್ನು ನಾನು ಮಾಡುವುದಿಲ್ಲ. ಆದರೆ ಯಜ್ಞದ ನಿಜ ಅರ್ಥವನ್ನು ಅರಿತವರು ಪ್ರಪಂಚದಲ್ಲಿ ಬಹಳ ವಿರಳ. ನಿಜವಾದ ಯಜ್ಞವನ್ನು ಯಾರು ಮಾಡುತ್ತಿದ್ದಾರೆ? ವೇದ ಮಂತ್ರಗಳ ಅರ್ಥವನ್ನು ಸರಿಯಾಗಿ ಅರಿಯದೆ ಯಜ್ಞಗಳ ಪ್ರಚಾರವನ್ನು ಮಾಡಲಾಗುತ್ತಿದೆ. ಸತ್ಕರ್ಮರೂಪದ ಹವಿಸ್ಸಿನಿಂದಲೇ ದೇವತೆಗಳು ಸಂತುಷ್ಟ ರಾಗುವರು. ಲೌಕಿಕ ಕಾಮನೆಯಿಂದ ಯಜ್ಞ ಮಾಡುವವನಿಗೆ ಪೂರ್ಣ ಸಂತಾಪವು ಪ್ರಾಪ್ತವಾಗುತ್ತದೆ. ಸಮ್ಯಕ್ ದರ್ಶನವನ್ನು ಹೊಂದಿರುವವನಿಗೆ ಅವೇ ರೀತಿಯ ಮಗ ಹುಟ್ಟುವನು. ಯಥಾ ರಾಜಾ, ತಥಾ ಪ್ರಜಾ; ಯಥಾ ಪಿತಾ, ತಥಾ ಪುತ್ರಃ. ಶ್ರದ್ಧಾಪೂರ್ವಕವಾಗಿ, ನಿಷ್ಕಾಮ ಬುದ್ಧಿಯಿಂದ ಯಜ್ಞ ಮಾಡು ವವನಿಗೆ ಧರ್ಮದ ಮೆಟ್ಟಿಲು ಏರುತ್ತಾ ಹೋದಂತೆಯೇ ಲೆಕ್ಕ. ಶುಭ ಸಂಕಲ್ಪ ವಿದ್ದಲ್ಲಿ ವೃಕ್ಷಗಳಲ್ಲಿ, ಲತೆಗಳಲ್ಲಿ ಸುಂದರ ಹೂಗಳು ಬಿಡುತ್ತವೆ.



ಈಚೆಗೆ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ಅವರು ತಿ.ತಿ.ದೇ. ಉಪವನ ವಿಭಾಗದ ಬಗ್ಗೆ ಪುಸ್ತಕ ಬಿಡುಗಡೆ ಮಾಡಿದಾಗ ತೆಗೆದ ಚಿತ್ರ.

"ಎಲ್ಲರೂ ಯಾವಾಗಲೂ ಸದಾಚಾರಿ ಗಳಾಗಿ, ಈರ್ಷ್ಯಾ ದ್ವೇಷ ರಹಿತರಾಗಿರ ಬೇಕು".

"ಬ್ರಹ್ಮಾನಂದವು ರಸಗಳಲ್ಲೆಲ್ಲ ಶ್ರೇಷ್ಠ ವಾದುದು. ಬ್ರಹ್ಮನನ್ನು ಅರಿಯುವುದು, ಬ್ರಹ್ಮ ಸಾಕ್ಷಾತ್ಕಾರ ಮಾಡಿಕೊಳ್ಳುವು ದರಿಂದ ಧರ್ಮ ರಹಸ್ಯವು ತಾನೇ ತಾನಾಗಿ ಲಭ್ಯವಾಗುತ್ತದೆ'.

ಇದನ್ನು ಆಲಿಸಿ, ಜಾಜಲಿಯು ಆನಂದ ತುಂದಿಲನಾಗಿ ಹೇಳಿದ,

"ತುಲಾಧಾರ ಧರ್ಮದ ಇಂತಹ ಪ್ರತಿ ಪಾದನ ರೂಪವನ್ನು ನಾನು ಇಂದಿನವರೆಗೂ ಆಲಿಸಿಯೇ ಇರಲಿಲ್ಲ. ನನ್ನದೊಂದು ಸಂಶಯವಿದೆ – ಅದೇನೆಂದರೆ 'ಅಜ್ಞಾನಿ ಮಾನವನು ಆತ್ಮಯಜ್ಞದ ಮಹದ್ಭಾಗ್ಯ ವನ್ನು ಹೊಂದಲಾರ. ಹಾಗಿರುವಾಗ ಯಾವ ಧರ್ಮವು ಅವನಿಗೆ ಸುಖ ಪ್ರಾಪ್ತಿ ಯನ್ನು ನೀಡುತ್ತದೆ?

ತುಲಾಧಾರನು ಹೇಳಿದ,

"ಅಂತಹವರಿಗೆ ಶ್ರದ್ಧಾಪೂರ್ವಕವಾದ ನಡತೆಯೇ ಯಜ್ಞ ಸಮಾನ. ಅಶ್ರದ್ಧೆ ಮತ್ತಿತರ ದೋಷಗಳಿಂದ ಯಜ್ಞ ಮಾಡಿದರೂ, ಅದು ಯಜ್ಞ ಎನ್ನಿಸಿ ಕೊಳ್ಳುವುದಿಲ್ಲ. ಅದು ಡಾಂಭಿಕತನ ಎನ್ನಿಸಿ ಕೊಳ್ಳುತ್ತದೆ. ಶ್ರದ್ಧೆಯನ್ನು ಪತ್ನಿ ಯನ್ನಾಗಿ ಮಾಡಿಕೊಳ್ಳಿ, ಯಜ್ಞವನ್ನು ತನ್ನ ಆರಾಧ್ಯದೈವವನ್ನಾಗಿ ಪೂಜೆ ಮಾಡ ಬೇಕು. ಆಗ ಯಜ್ಞಪುರುಷ ಶ್ರೀ ವಿಷ್ಣುವು ಅನುಗ್ರಹೀತನಾಗುತ್ತಾನೆ...

ಜಾಜಲಿ ಋಷಿಗಳೆ! ತೀರ್ಥಕ್ಷೇತ್ರ ಎನ್ನುವುದು ಬೇರೆ ಎಲ್ಲಿಯೂ ಇಲ್ಲ, ನಮ್ಮ ಹೃದಯದಲ್ಲೇ ಇದೆ. ಅದೇ ಆತ್ಮ. ಇದ ಕ್ಕಾಗಿ ದೇಶಗಳನ್ನು ಸುತ್ತುವುದು ಏಕೆ?... ನಾನು ವಿವರಿಸಿರುವ ಅಹಿಂಸಾಧರ್ಮವೇ ಉತ್ತಮವಾದುದು. ಅದನ್ನು ಆಚರಿಸಿ".

ತುಲಾಧಾರನ ಈ ರೀತಿಯ ಆತ್ಮ ಜ್ಞಾನನ ವಿವರವನ್ನು ಕೇಳಿದ ಮೇಲೆ ಜಾಜಲಿಯ ಗರ್ವವು ತನ್ನಷ್ಟಕ್ಕೆ ತಾನೆ ಭಗ್ನವಾಯಿತು. ★

# ಯುವವಾಣಿ

# ಕುಮಾರವ್ಯಾಸನ ಅಭಿಮನ್ಯು

ಕುಮಾರವ್ಯಾಸ ಭಾರತ ಕನ್ನಡಿಗರ ಮಾಹಾಮಾನಸದಲ್ಲಿ ಶಾಶ್ವತ ಸ್ಥಾನಗಳಿಸಿರುವ ಒಂದು ಶ್ರೇಷ್ಠ ಕಾವ್ಯ. ಈ ಕೃತಿಯನ್ನು ರಚಿಸಿದ ಕುಮಾರವ್ಯಾಸ ಬಹುಶ್ರುತನೂ, ಯೋಗೀಂದ್ರನೂ, ದಾರ್ಶನಿಕನೂ ಆಗಿದ್ದು, ತನ್ನ ವಿಶೇಷ ಕಾವ್ಯ ಪ್ರತಿಭೆಯಿಂದ ಜ್ಞಾನ, ಯೋಗ, ದರ್ಶನ ಮತ್ತು ಲೋಕಾನುಭವಗಳನ್ನು ವಿಶಿಷ್ಟ ರೀತಿಯಿಂದ ತನ್ನ ಕಾವ್ಯದಲ್ಲಿ ಒಡಮೂಡಿಸಿದ ಮಹಾಕವಿ. ಭಕ್ತಿರಸದಲ್ಲಿ ಮಿಂದು, ಶ್ರೀಕೃಷ್ಣನ ಮಹಿಮೆಯನ್ನು ತನ್ಮಯತೆಯಿಂದ ಹಾಡಿ ಓದುಗರನ್ನೂ ಭಕ್ತಿಯ ಪ್ರವಾಹದಲ್ಲಿ ತೇಲಿಸಿದ್ದಾನೆ. ಧರ್ಮ, ನೀತಿ, ಆಧ್ಯಾತ್ಮಿಕ ವಿಚಾರಗಳನ್ನು ಸರ್ವಜನಗ್ರಾಹ್ಯವಾಗುವಂತೆ ವಿವರಿಸಿದ್ದಾನೆ.

ವಿಶ್ವದ ಶ್ರೇಷ್ಠ ಸಾಹಿತ್ಯ ಕೃತಿಗಳ ಪಂಕ್ತಿಯಲ್ಲಿ ನಿಲ್ಲುವ ಕೃತಿ ಗದುಗಿನ ಭಾರತ. ಮಹಾಭಾರತದ ಕಥೆಯ ಮೂಲಕ ಕವಿ ಲೋಕ ಜೀವನದ ಎಲ್ಲ ಅನುಭವಗಳನ್ನೂ, ಮಾನವ ಮನಸ್ಸಿನ ಸ್ವಭಾವಗಳ ವಿಶ್ಲೇಷಣೆಯನ್ನು, ಪ್ರಾಚೀನ, ಅರ್ವಾಚೀನ ಸಂಗತಿಗಳ ಸಹಯೋಗವನ್ನು ಮರ್ತ್ಯಾಮರ್ತ್ಯಗಳ ಸಮ್ಮಿಳನವನ್ನು ಸರ್ವಧರ್ಮ ಸಮನ್ವಯವನ್ನು ತಂದಿದ್ದಾನೆ. ವ್ಯಾಸ ಮಹಾಭಾರತವನ್ನೇ ಕವಿ ಬಹುಮಟ್ಟಿಗೆ ಅನುಸರಿಸಿದ್ದರೂ ತನ್ನ ವಿಶಿಷ್ಟ ಪ್ರತಿಭೆಯಿಂದ ಸ್ವತಂತ್ರವಾದ ಕಾವ್ಯವನ್ನೇ ರಚಿಸಿದ್ದಾನೆ. ಕವಿಯ ಸ್ವತಂತ್ರ ದೃಷ್ಟಿ ಆತನ ಪಾತ್ರ ಸೃಷ್ಟಿಯಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಯುಧಿಷ್ಠಿರ, ಭೀಮಸೇನ, ಅರ್ಜುನ, ಅಭಿಮನ್ಯು, ದುರ್ಯೋಧನ ಮತ್ತು ಭೀಷ್ಮ ದ್ರೋಣರುಗಳು ಕುಮಾರವ್ಯಾಸನ ಕಾವ್ಯ ಪ್ರತಿಭೆಯಿಂದ ಒಡಮೂಡಿದ ಜೀವಂತ ಪಾತ್ರಗಳು.

**ಶ್ರೀ ಚಿ. ನ. ಕೃಷ್ಣಮೂರ್ತಿ**

ಕುಮಾರವ್ಯಾಸ ಭಾರತ, ಕವಿಯೇ ಹೇಳಿರುವಂತೆ 'ಅರಸುಗಳಿಗಿದು ವೀರ'. ಕೌರವ ಪಾಂಡವ ಪಕ್ಷಗಳಲ್ಲಿ ಅತಿರಥ ಮಹಾರಥರನ್ನು ಕಾಣುತ್ತೇವೆ. ಭೀಷ್ಮ, ದ್ರೋಣ, ಕರ್ಣ, ಅರ್ಜುನ-ಈ ಪರಾಕ್ರಮಿಗಳ ಸೆಣಸಾಟ ನಮ್ಮನ್ನು ತಲ್ಲಣಗೊಳಿಸುತ್ತದೆ. ಇಂತಹ ವೀರ ಪುರುಷರ ಸಾಲಿನಲ್ಲಿ ಕುಮಾರ ಅಭಿಮನ್ಯು ಓದುಗರ ಹೃದಯದಲ್ಲಿ ಶಾಶ್ವತವಾಗಿ ನಿಂತು ಅವರ ಹೃದಯವನ್ನು ಸೂರೆಗೊಳ್ಳುತ್ತಾನೆ. ಅಭಿಮನ್ಯುವಿನ ಪಾತ್ರ ಕಾವ್ಯದ ಅತ್ಯಂತ ಹೃದಯಸ್ಪರ್ಶಿ ಪಾತ್ರವಾಗಿದೆ. ಕವಿಯ ಪ್ರತಿಭಾ ಪರಾಕಾಷ್ಠತೆಗೆ ಇದೊಂದು ಜ್ವಲಂತ ನಿದರ್ಶನ.

ದ್ರೋಣಾಚಾರ್ಯರು ಧರ್ಮಜನನ್ನು ಸೆರೆ ಹಿಡಿಯಲು ಪ್ರತಿಜ್ಞೆ ಮಾಡಿದರು. ಇದಕ್ಕಾಗಿ ಅವರು ಪದ್ಮವ್ಯೂಹ ರಚನೆ ಮಾಡಿದರು. ಆ ವೇಳೆಗೆ ಸರಿಯಾಗಿ ಸಂಶಪ್ತಕರು ಒಟ್ಟಾಗಿ ಬಂದು ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಿದರು. ಅರ್ಜುನನಿಗೆ ಸಂದಿಗ್ಧ ಒದಗಿತು. ಯುದ್ಧಕ್ಕೆ ಕರೆದರೆ ಒಲ್ಲೆನೆಂದು ಹೇಳುವುದಿಲ್ಲ ಎಂಬುದು ಅರ್ಜುನನ ಶಪಥ. ಆದರೆ ದ್ರೋಣರು ಧರ್ಮರಾಯನನ್ನು ಸೆರೆಹಿಡಿಯುವುದಾಗಿ ಹೇಳಿದ್ದಾರೆ. ದಿಕ್ಕುಗೆಟ್ಟ ಅರ್ಜುನ ಕೃಷ್ಣನ ಸಲಹೆ ಕೇಳಿದಾಗ ಅದಕ್ಕೆ ಕೃಷ್ಣ "ನಿನ್ನ ಕುಮಾರನು ಇವರೊಡನೆ ಕಾದುವನು ಅವನಿಗೆ ಈ ಯುದ್ಧ ಒಂದು ಲಕ್ಷ್ಯವೇ? ನೀನು ಸಂಶಪ್ತಕರನ್ನು ಎದುರಿಸಲು ಹೊರಡು" ಎನ್ನುತ್ತಾನೆ. ಸಮಾಧಾನ ತಾಳಿದ ಅರ್ಜುನ ಕೃಷ್ಣನೊಡನೆ ಸಂಶಪ್ತಕರೊಂದಿಗೆ ಯುದ್ಧಕ್ಕೆ ಹೊರಟನು. ಇತ್ತ ಪಾಂಡವ ವೀರರು ಪದ್ಮವ್ಯೂಹವನ್ನು ಭೇದಿಸಲು ಹೊರಟು ನಿಷ್ಫಲರಾದರು. ಸುದ್ದಿ ತಿಳಿದ ಧರ್ಮರಾಯ ಚಿಂತಿಸಿದನು. ಕೃಷ್ಣಾರ್ಜುನರು ಮಾತ್ರ ಈ ವ್ಯೂಹವನ್ನು ಭೇದಿಸಬಲ್ಲರು. ಆದರೆ ಈಗ ಅವರು ಇಲ್ಲಿಲ್ಲ. ಅಭಿಮನ್ಯು ವ್ಯೂಹವನ್ನು ಮುರಿದು ಒಳಹೋಗಬಲ್ಲವನಾದರೂ ಹೊರಗೆ ಬರಲು ತಿಳಿಯದು. ಮೇಲಾಗಿ ಅವನಿನ್ನೂ ಬಾಲಕ ಎಂದು ಮನದಲ್ಲಿಯೇ ಚಿಂತಿಸಿದನು. ಆ ವೇಳೆಗೆ ಅಲ್ಲಿಗೆ ಬಂದ ಅಭಿಮನ್ಯು

ಅಳಿಯನೀ ಮೋಹರದೊಳಗೆ
ಫಲುಗುಣನ ಮಗನಿವನು ಬಲುಗೈ
ಯುಳುಹಬಾರದು ಕಾಯಿದರೆ ಕಲಿಯುಗಕೆ ಗತಿಯಿಲ್ಲ
ಫಲುಗುಣನ ನಾವಿತ್ತಲೊಯ್ದರೆ
ಬಳಿಕ ನಿರ್ಣಯವೆಂದು ಮನದಲಿ
ತಿಳಿದು ಪಾರ್ಥಂಗೆಂದನಸುರಾರಾತಿ ನಸುನಗುತ

ದಂಡಿನಲ್ಲಿ ಸೋದರ ಮಾವನೇ! ಅಲ್ಲವೆಂದರೂ ಆ ಜಗನ್ನಾಟಕ ಸೂತ್ರಧಾರಿಯ ಮಾತು ಸ್ಪಷ್ಟವಾಗಿ ಅಭಿಮನ್ಯುವಿನ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಅಭಿಮನ್ಯುವನ್ನು ಉಳಿಸಿದರೆ ಕಲಿಯುಗ ನಡೆಯದು. ಎಂತಲೇ ಅವನು ಪದ್ಮವ್ಯೂಹದಲ್ಲಿ ಕೀರ್ತಿಶೇಷನಾಗಬೇಕು. ಕುಮಾರವ್ಯಾಸನ ಪ್ರತಿಭೆ 'ಅವ'ನ ಆಟಕ್ಕೆ ಕಾರಣವನ್ನು ಊಹಿಸುತ್ತಿದೆ ಸಮರ್ಥವಾಗಿ. 'ಅಳಿಯ' ಪದದ ಎರಡರ್ಥವೂ ಸ್ಪಷ್ಟ.

ದೊಡ್ಡಪ್ಪನಿಗೆ ನಮಿಸಿ "ತಂದೆಯೆ, ನನಗೆ ಅಪ್ಪಣೆಯನ್ನು ಕೊಡು. ಪದ್ಮವ್ಯೂಹವನ್ನು ಭೇದಿಸುವ ರಹಸ್ಯ ನನಗೆ ತಿಳಿದಿದೆ. ಯುದ್ಧವನ್ನು ಗೆದ್ದು ಶತ್ರುಗಳನ್ನು ಯಮಸದನಕ್ಕೆ ಅಟ್ಟುತ್ತೇನೆ" ಎಂದನು. ಧರ್ಮರಾಯ ಅಭಿಮನ್ಯುವನ್ನು ಬಿಗಿದಪ್ಪಿ "ನೀನು ಅಸಮಾನಶೂರ ನಿಜ. ಆದರೆ ಶತ್ರುಸಮೂಹದಲ್ಲಿ ವೀರಾಧಿವೀರರಿದ್ದಾರೆ, ಅವರ ಆಕ್ರಮಣವನ್ನು ನೀನು ಹೇಗೆ ತಡೆಯುವೆ. ಸಮುದ್ರ ಮಧ್ಯದ ಸುಳಿಯಲ್ಲಿ ಸುಳಿಯಬಹುದು. ಕಾಲರುದ್ರನ ಕೊರಳೊಳಗೆ ಕುಣಿಯಬಹುದು. ಕಾಲಸರ್ಪನ ಮಂಡಲದೊಳಗ ಆಡಬಹುದು. ಆದರೆ ಪದ್ಮವ್ಯೂಹ ರಚನೆಯನ್ನು ಗೆಲ್ಲುವುದು ಕಷ್ಟ" ಎಂದನು. ಧರ್ಮರಾಯನ ಈ ಮಾತುಗಳಿಂದ ಅಭಿಮನ್ಯು ಎಳ್ಳಷ್ಟು ಹೆದರಲಿಲ್ಲ. ಅವನ ರಣೋತ್ಸಾಹ ಕುಗ್ಗಲಿಲ್ಲ. ಅಭಿಮನ್ಯುವಿನ ಉತ್ತರವನ್ನು ಕುಮಾರವ್ಯಾಸ ಬಹು ಸುಂದರವಾಗಿ ಹೇಳಿದ್ದಾನೆ.

ಬಿಡು ಮರೀಚಿಯ ತೊರೆಗೆ ಹರಿಗೋ
ಲಿಡುವರುಂಟೆ ಲಿಪ್ಪದುರುಗನ
ಹಿಡಿವಡೇತಕೆ ಗರುಡಮಂತ್ರವು
ಚಪಲನೆನ್ನದಿರು
ಕೊಡನ ಮಗನ ಕುಮಂತ್ರದೊಡ್ಡಿನ
ಕಡಿತಕಾನಂಜುವೆನೆ ವೆಗ್ಗಳ
ನುಡಿಯಲಮ್ಮೆನು ತನ್ನನೀಗಳೆ ಬಿಟ್ಟು
ನೋಡೆಂದ

ಹೀಗೆ ಇಬ್ಬರಲ್ಲಿಯೂ ವಾದ ವಿವಾದಗಳು ನಡೆದು ಕೊನೆಗೆ ವಿಧಿ ಇಲ್ಲದೆ ಧರ್ಮರಾಯ ಅಭಿಮನ್ಯುವನ್ನು ಯುದ್ಧಕ್ಕೆ ಕಳುಹಿಸಲು ಒಪ್ಪಿದನು. ಅಭಿಮನ್ಯುವಿನ ರಥ ಯುದ್ಧಭೂಮಿಯತ್ತ ಹೊರಟಿತು. ಸಾರಥಿ ಅಭಿಮನ್ಯುವಿನ ಪರಾಕ್ರಮದ ಒಗ್ಗೆ ಸಂದೇಹ ವ್ಯಕ್ತ ಪಡಿಸಿದಾಗ ಅಭಿಮನ್ಯು ಸಾರಥಿಗೆ ಕೊಡುವ ಉತ್ತರ ಅವನ ಉತ್ತುಂಗ ಪೌರುಷಕ್ಕೆ ಸಾಕ್ಷಿ ಎನಿಸಿದೆ.

ಬವರವಾದರೆ ಹರನ ವದನಕೆ
ಬೆವರ ತಹೆನವಗಡಿಸಿದರೆ ವಾ
ಸವನ ಸದೆವೆನು ಹೊಕ್ಕಡಹುದೆನಿಸುವೆನು
ಭಾರ್ಗವನ"

ವ್ಯೂಹದ ಬಾಗಿಲನ್ನು ಕಾಯುತ್ತಿದ್ದ ಜಯದ್ರಥನನ್ನು ಅಭಿಮನ್ಯು ಮೊದಲಿ ಸುತ್ತ, ಅವನ ರಥದ ಕುದರೆಗಳನ್ನು ಕೊಂದು, ಸಾರಥಿಯನ್ನು ತುಂಡರಿಸಿ ವ್ಯೂಹವನ್ನು ಮುರಿದು ಒಳಪ್ರವೇಶಿಸಿದನು. ಅಭಿಮನ್ಯು ಅಸಮಾನ್ಯ ಬಿಲ್ಗಾರಿಕೆಯನ್ನು ಪ್ರದರ್ಶಿಸಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಶತ್ರುಸೈನಿಕರನ್ನು ಕೊಂದನು. ಕೌರವ ಪಕ್ಷದ ಮಹಾವೀರರನ್ನು ತನ್ನೊಡನೆ ಯುದ್ಧಕ್ಕೆ ಆಹ್ವಾನಿಸಿದನು. ಅವನ ಆರ್ಭಟಕ್ಕೆ ಕೌರವಸೈನ್ಯ ತತ್ತರಿಸಿ ದಿಕ್ಕುಗೆಟ್ಟು ಪಲಾಯನ ಮಾಡಿತು. "ಮಗುವಿನ ಮಕ್ಕಳಾಟಿಕೆ ಮಾರಿಯಾಯಿತು ವೈರಿ ರಾಯರಿಗೆ", ಎಂದು ಕವಿ ಆ ಪ್ರಳಯವನ್ನು ಸುಂದರವಾದ ರೂಪಕದಲ್ಲಿ ಹೇಳುತ್ತಾನೆ. ಹೀಗೆ ಅಭಿಮನ್ಯು ಅರಿಭಯಂಕರನಾಗಿ ಕಾಳ್ಕಿಚ್ಚು ಕಾಡೆಲ್ಲವನ್ನು ದಹಿಸುವಂತೆ ಏಕಾಂಗಿಯಾಗಿ ಶತ್ರುಸಮೂಹವನ್ನು ನಾಶಗೊಳಿಸುತ್ತಿರುವಾಗ ಅಭಿಮನ್ಯುವಿನ ಪರಾಕ್ರಮವನ್ನು ದುರ್ಯೋಧನನೂ ಸಹ ಹೊಗಳುತ್ತಾನೆ.

ಹರುಡ ಮರೆದೆನು ಮಗನೆ ಸಾಲದೆ
ಭರತ ಕುಲದಲಿ ನಿನ್ನ ಬೆಳವಿಗೆ
ಯೆರಡು ಕವಲನ್ವಯಕೆ ಕೊಡದೇ
ಸುಗತಿ ಸಂಪದವ

ಹೀಗೆ ಹೊಗಳಿದರೂ ಕೂಡಲೇ ತನ್ನ ಸೈನ್ಯವನ್ನು ಒಟ್ಟಾಗಿಸಿ ಅಭಿಮನ್ಯುವನ್ನು ಎದುರಿಸುತ್ತ "ನೀನು ಮಗು ಕೆಡಬೇಡ ಹೋಗು" ಎಂದನು. ಅಭಿಮನ್ಯು ನಗುತ್ತ "ಮಗವು ತಾನಹೆ ತನ್ನ ಬಾಣಕೆ ಮಗುವುತನವು ಬೇರಿಲ್ಲ'' ಎಂದು ಹೇಳಿ ದುರ್ಯೋಧನನನ್ನು ತೀಕ್ಷ್ಣವಾದ ಬಾಣಗಳಿಂದ ನೋಯಿಸುತ್ತಾನೆ. ಅಭಿಮನ್ಯುವಿನ ಕೈಚಳಕದಿಂದ ಕ್ಷಣಾರ್ಧದಲ್ಲಿ ಕೌರವನ ತೇರು ಬಾಣಗಳಿಂದ ಮುಚ್ಚಿಹೋಯಿತು. ಇದನ್ನು ನೋಡಿದ ದ್ರೋಣಾಚಾರ್ಯರು ಧರ್ಮರಾಯನ ಯೋಜನೆ ಬಿಟ್ಟು ಕೌರವನನ್ನು ರಕ್ಷಿಸಲು ಮುಂದಾದರು.

ದ್ರೋಣಾಚಾರ್ಯರಂತಹ ವೀರರೇ "ರಣದಾಯ ತಪ್ಪಿತು'' ಎಂದ ಮೇಲೆ ಅಭಿಮನ್ಯುವಿನ ಅಸದಳವಾದ ಪರಾಕ್ರಮ ಅರಿವಾಗುತ್ತದೆ. ಶಲ್ಯ ಅಭಿಮನ್ಯುವನ್ನು ಬಾಲಕನೆಂದು ಹಂಗಿಸಿ ಎಗುರಾಗುತ್ತಾನೆ. ಆದರೆ ಒಂದೇ ನಿಮಿಷದಲ್ಲಿ ಅಭಿಮನ್ಯುವಿನ ಶರಾಘಾತಕ್ಕೆ ಸಿಕ್ಕಿ ಹಿಂತಿರುಗಬೇಕಾಗುತ್ತದೆ; ಇನ್ನು ದುಶ್ಶಾಸನನ ಸರದಿ, ಅವನೂ ಸಹ ಹಸುಳೆಯೆಂದು ಮೂದಲಿಸಿ "ಆ ಕಿರೀಟಿ ವೃಕೋದರರು ಮೈಸೋಕಿದರೆ ಸಂತೋಷ'' ಎನ್ನುತ್ತಾನೆ. ವೀರ ಅಭಿಮನ್ಯು "ಮೊದಲು ನನ್ನನ್ನು ಗೆದ್ದು ಬಳಿಕ ಭೀಮಾರ್ಜುನರನ್ನು ಅಪೇಕ್ಷಿಸು. ನಿನ್ನ ಶರೀರವನ್ನು ಸೀಳಿ ತಿಳಿರಕುತಲಿ ತಾಯ ತುರುಬನು ನಾದುವೆನು'' ಎಂದು ಪೌರುಷದ ಉತ್ತರ ಕೊಡುತ್ತಾನೆ. ಹಾಗೆ ಹೇಳುತ್ತಿದ್ದಂತೆಯೆ ಅವನ ಬಿಲ್ಲಿನಿಂದ ಹೊರಟ ಬಾಣ

ಗಳು ದುಶ್ಶಾಸನನ ಶರೀರವನ್ನು ಮುಚ್ಚಿ ಘಾತಿಸಿದವು. ದುಶ್ಶಾಸನ ನೋವಿನಿಂದ ನರಳುತ್ತ ಯುದ್ಧ ಭೂಮಿಯಿಂದ ಹಿಂತಿರುಗಿದನು. ದುರ್ಯೋಧನನ ನೂರು ಮಂದಿ ಮಕ್ಕಳು ಅಭಿಮನ್ಯುವನ್ನು ಎದುರಿಸಿ ಅವನ ಬಾಣಗಳಿಗೆ ಆಹುತಿಯಾದರು "ಉರಗನಿಕ್ಕುಡಿಗಾರ ಹುಲ್ಲಿನಸರವಿಗಂಜುವುದುಂಟೆ?" ದ್ರೋಣರಂತೂ "ಪೂತು ಮಝು, ಬಿಲ್ಲಾಳ ತನವಿದು ಭೂತನಾಥಂಗಿಲ್ಲ'' ಎಂದು ಹೊಗಳಿದರು. ಒಟ್ಟಿನಲ್ಲಿ ದ್ರೋಣ ಕೃಪ, ಕರ್ಣ, ಶಲ್ಯರೆಲ್ಲರೂ ಅಭಿಮನ್ಯುವಿನ ಪರಾಕ್ರಮದ ಮುಂದೆ ಕೈಸಾಗದೆ ಮಣಿಯಬೇಕಾಯಿತು. ಕೊನೆಗೆ ಬೇರೆ ದಾರಿ ಕಾಣದ ದ್ರೋಣಾಚಾರ್ಯರು ಕರ್ಣನನ್ನು ಕರೆದು, "ಇವನನ್ನು ನೇರವಾಗಿ ಎದುರಿಸಿ ಗೆಲ್ಲುವುದು ಅಸಾಧ್ಯ. ನೀನು ಹಿಂದಿನಿಂದ ಹೋಗಿ ಬಿಲ್ಲನ್ನು ಕತ್ತರಿಸು, ಬಳಿಕ ನಾವು ಎದುರಿಸುತ್ತೇವೆ. ಕೌರವನನ್ನು ಉಳಿಸಲು ಇದೊಂದೇ ದಾರಿ'' ಎಂದರು. ದ್ರೋಣರ ಮಾತಿನಂತೆ ಕರ್ಣ ಹಿಂದಿನಿಂದ ಹೋಗಿ ಅಭಿಮನ್ಯುವಿನ ಬಿಲ್ಲನ್ನು ತುಂಡರಿಸಿದನು. ಕೂಡಲೆ ದ್ರೋಣ ಅಶ್ವತ್ಥಾಮರು ಬಾಲಕನ ಸಾರಥಿಯನ್ನು ರಥ ಕುದುರೆಗಳನ್ನು ನಾಶಪಡಿಸಿದರು. ಆದರೂ ಅಭಿಮನ್ಯು ಅಳುಕಲಿಲ್ಲ. ಖಡ್ಗಧಾರಿಯಾಗಿ ಶತ್ರುಗಳ ರುಂಡಗಳನ್ನು ಕಡಿ ಕಡಿದು ತೂರಿದನು. "ಸಿಡಿಲು ಜಂಗಮವಾಯ್ತೋ, ಪ್ರಳಯರುದ್ರನು ಬಾಲಕನಾದನೋ" ಎಂದನು ಕೌರವರಾಯ. ಶತ್ರುಸೈನ್ಯದಿಂದ ಹೊರಟ ಬಾಣಗಳು ಬಾಲಕನ ದೇಹವನ್ನು ನಾಟಿ ಇಡೀ ದೇಹವೆಲ್ಲ ಶರಮಯವಾಯ್ತು. ಕರ್ಣನು ಮತ್ತೆ ಹಿಂದಿನಿಂದಲೇ ಅಭಿಮನ್ಯುವಿನ ಎರಡು ಕೈಗಳನ್ನು ಕತ್ತರಿಸಿಬಿಟ್ಟನು. ಆದರೂ ಅಭಿಮನ್ಯು ಹೆದರಲಿಲ್ಲ. ತುಂಡಾದ ಕೈಗಳಿಗೆ ರಥದ ಗಾಲಿಗಳನ್ನು ಸಿಕ್ಕಿಸಿಕೊಂಡು ಎದುರಿಗೆ ಬಂದ ಭಟರನ್ನು ಪುಡಿ ಪುಡಿ ಮಾಡಿದನು. ಆ ವೇಳೆಗೆ ದುಶ್ಶಾಸನನ ಮಗನು ಗದೆಯಿಂದ ಬಲವಾಗಿ ಹೊಡೆದಾಗ ಅಭಿಮನ್ಯು ಮಡಿದನು. ಕುಮಾರವ್ಯಾಸ ಅಭಿಮನ್ಯುವಿನ ಸಾವನ್ನು ವಿರೋಚಿತವಾಗಿ ಬಣ್ಣಿಸಿದ್ದಾನೆ. ಕಾಳ್ಗಿಚ್ಚು ಲಕ್ಷ ನಾಲಿಗೆಗಳುಳ್ಳ ಜ್ವಾಲೆಗಳಾಗಿ ಎಲ್ಲವನ್ನೂ ನಾಶಮಾಡಿ ಕಗ್ಗಂತೆ ಸುಂಟರಗಾಳಿ ಆಕಾಶದ ಮೋಡಗಳ ಗುಂಪನ್ನು ಧಾಳಿಮಾಡಿ ಓಡಿಸಿ ಅನಂತರ ತನ್ನ ಪಾಲಿಗೆ ತಾನು ಶಾಂತವಾಗುವಂತೆ ಸುರಪಾಲಕನ ತನಯನ ತನಯನು ಅಸ್ತಮಿಸಿದನು. ರಣದೊಳಗೆ ಯುದ್ಧದಲ್ಲಿ ಮಡಿದು ವೀರಸ್ವರ್ಗವನ್ನೇರಿದ ಅಭಿಮನ್ಯುವಿನ ಪೌರುಷ ಪರಾಕ್ರಮಗಳಿಗೆ ಅನ್ವಾಯೃಶವಾದ ಸ್ಮಾರಕವನ್ನು ಪದ್ಯರೂಪದಲ್ಲಿ ರಚಿಸಿದ್ದಾನೆ ಕವಿ ನಾರಣಪ್ಪ.

ತೋಳ ತಲೆದಿಂಬಿನಲಿ ಕೈದುಗ
ಳೋಳಿಗಳ ಹಾಸಿನಲಿ ತನ್ನಯ
ಕಾಲದೆಸೆಯಲಿ ಕೆಡೆದ ಕೌರವ ಸುತರು ನೂರ್ವರಲಿ
ಬಾಲಕನು ಬಳಲಿದನು ಸಮರದ
ಲೀಲೆಯಲಿ ಕುಣಿ ಕುಣಿದು ಬಸವಳಿ
ದಾಳುಗಳ ದೇವನು ಮಹಾಹವದೊಳಗೆ ಪವಡಿಸಿದ

ಈ ಪದ್ಯ ಅಭಿಮನ್ಯುವಿನ ಮರಣಕ್ಕೆ ಎಂತಹ ಭವ್ಯಸ್ಮಾರಕವೊ ಕವಿ ಪ್ರತಿಭೆಗೂ ಅಷ್ಟೇ ಉಜ್ವಲ ನಿದರ್ಶನವಾಗಿದೆ. ಅಭಿಮನ್ಯುವಿನ ಪರಾಕ್ರಮವನ್ನು ಕವಿ ಮೂರು ಸಂಧಿಗಳಲ್ಲಿ ಬಣ್ಣಿಸಿದ್ದರೂ ಓದುಗರಿಗೆ ಬೇಸರವಾಗದೆ ಒಂದೊಂದು ಪದ್ಯದಲ್ಲಿಯೂ ವೀರರಸ ಹೊನಲಾಗಿ ಹರಿದು ಅವರನ್ನು ರೋಮಾಂಚನಗೊಳಿಸುತ್ತದೆ. ಬಾಲಕನಾದ ಅಭಿಮನ್ಯುವಿನ ಸಾಹಸವ ಸಮರವನ್ನು ಕುಮಾರವ್ಯಾಸ ಮೈತುಂಬಿ ಹಾಡಿದ್ದಾನೆ. ಓದುಗರನ್ನು ವೀರರಸದಲ್ಲಿ ಮುಳುಗಿಸಿ ಅವನ ಪೌರುಷವನ್ನು ವೀರಾವೇಶದಿಂದ ಬಣ್ಣಿಸುತ್ತಿರುವಾಗಲೆ ಅವನ ವಧೆಯ ಸನ್ನಿವೇಶ. ವೀರಮರಣವನ್ನು ಕಂಡು ನಮ್ಮ ಹೃದಯ ದುಃಖದ ಭಾರದಿಂದ ಕುಗ್ಗಿ ಕಣ್ಣು ಹನಿಗೂಡುತ್ತದೆ. ಅಭಿಮನ್ಯುವಿನ ಪಾತ್ರ ನಮ್ಮ ಹೃದಯವನ್ನು ತುಂಬಿ ಶಾಶ್ವತಸ್ಥಾನ ಪಡೆಯುತ್ತದೆ. ವೀರಕರುಣ ರಸಗಳಿಂದ ಕೂಡಿದ ಇಂತಹ ಚಿತ್ರ ಸಾಹಿತ್ಯಲೋಕದಲ್ಲಿ ದೊರೆಯುವುದು ಅಪರೂಪವೆನ್ನಬೇಕು.

———

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸಕ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ—517501

(8ನೇ ಪುಟದಿಂದ )

ವಶೇ ಹಿ ಯಸ್ಯೇಂದ್ರಿಯಾಣಿ
ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ 61

ಅವೆಲ್ಲವನ್ನೂ ಬಿಗಿಹಿಡಿದು ನನ್ನನ್ನೇ ಗತಿಯೆಂದು ನನ್ನಲ್ಲಿಯೇ ಮನಸ್ಸಿಡಬೇಕು. ಯಾರ ಇಂದ್ರಿಯಗಳು ಹಿಡಿತದಲ್ಲಿರುವುವೋ ಅವನ ಪ್ರಜ್ಞೆ ಸ್ಥಿರವಾಗಿರುತ್ತದೆ.

ಧ್ಯಾಯತೋ ವಿಷಯಾನ್ ಪುಂಸಃ
ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ
ಕಾಮಾತ್ ಕ್ರೋಧೋಽಭಿಜಾಯತೇ ॥ 62

ಸುಖಸಾಧನಗಳನ್ನೇ ಹಂಬಲಿಸುತ್ತಿರುವವನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ. ಆಸಕ್ತಿಯಿಂದ ಬಯಕೆ ಹುಟ್ಟುತ್ತದೆ: ಬಯಕೆ ಈಡೇರದಾಗ ಸಿಟ್ಟು, ತಲೆಹಾಕುತ್ತದೆ.

ಕ್ರೋಧಾದ್ಭವತಿ ಸಂಮೋಹಃ
ಸಂಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿ ನಾಶಃ
ಬುದ್ಧಿ ನಾಶಾತ್ ವಿನಶ್ಯತಿ ॥ 63

ಸಿಟ್ಟಿನ ಮರಿ ಅವಿವೇಕ. ಅವಿವೇಕದಿಂದ ಧರ್ಮ-ಅಧರ್ಮಗಳ ಮರೆವು. ಇಂಥ ಮರೆವಿನಿಂದ ಬುದ್ಧಿ ಕೆಡುವುದೇ ಎಲ್ಲ ಅನರ್ಥದ ಮೂಲ.

ರಾಗದ್ವೇಷ ವಿಯುಕ್ತೈಸ್ತು
ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈ ರ್ವಿಧೇಯಾತ್ಮಾ
ಪ್ರಸಾದಮಧಿಗಚ್ಛತಿ ॥ 64

ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ಆಸಕ್ತಿಯಾಗಲಿ ದ್ವೇಷವಾಗಲೀ ಇಲ್ಲದೆ ತನ್ನ ಅಂಕಿತದಲ್ಲಿರುವ ಇಂದ್ರಿಯಗಳಿಂದ ವಿಷಯಗಳನ್ನು ಬಳಸುವವರ ಮನಸ್ಸು ತಿಳಿಯಾಗುತ್ತದೆ.

ಪ್ರಸಾದೇ ಸರ್ವದುಃಖಾನಾಂ
ಹಾನಿರಸ್ಯೋಪಜಾಯತೇ ।
ಪ್ರಸನ್ನಚೇತಸೋ ಹ್ಯಾಶು
ಬುದ್ಧಿಃ ಪರ್ಯವತಿಷ್ಠತೇ ॥ 65

ಮನಸ್ಸು ತಿಳಿಯಾದಾಗ ದುಃಖಗಳೆಲ್ಲ ದೂರವಾಗುತ್ತವೆ. ತಿಳಿಯಾದ ಮನಸ್ಸಿನವರ ಬುದ್ಧಿ ಬೇಗ ಭಗವಂತನಲ್ಲಿ ನೆಲೆಗೊಳ್ಳುತ್ತದೆ.

ನಾಸ್ತಿ ಬುದ್ಧಿ ರಯುಕ್ತಸ್ಯ
ನ ಚಾಯುಕ್ತಸ್ಯ ಭಾವನಾ ।
ನ ಚಾಭಾವಯತಃ ಶಾಂತಿಃ
ಅಶಾಂತಸ್ಯ ಕುತಃ ಸುಖಮ್ ॥ 66

ಮನಸ್ಸು ಹಿಡಿತದಲ್ಲಿರದವನಿಗೆ ಜ್ಞಾನಸಿದ್ಧಿ ಇಲ್ಲ. ಅಂಥವರಿಗೆ ಧ್ಯಾನವೂ ಸಿದ್ಧಿಸುವುದಿಲ್ಲ. ಧ್ಯಾನ ಇಲ್ಲದೆ ಶಾಂತಿ ಇಲ್ಲ. ಶಾಂತಿ ಇಲ್ಲದವನಿಗೆ ಸುಖವೆಲ್ಲಿಯದು !

ಇಂದ್ರಿಯಾಣಾಂ ಹಿ ಚರತಾಂ
ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ
ವಾಯುರ್ನಾವಮಿವಾಂಭಸಿ ॥ 67

ವಿಷಯಗಳತ್ತ ಹರಿಯುವ ಇಂದ್ರಿಯಗಳ ಜತೆಗೆ ಮನಸ್ಸನ್ನು ಹೋಗಗೊಟ್ಟರೆ ಅದು ನಡುನೀರಿನಲ್ಲಿರುವ ಹಡಗನ್ನು ಬಿರುಗಾಳಿ ಹೇಗೆ, ಹಾಗೆ ಸಾಧಕನ ಪ್ರಜ್ಞೆಯನ್ನು ಹಾರಿಸಿ ಬಿಡುತ್ತದೆ.

ತಸ್ಮಾದ್ಯಸ್ಯ ಮಹಾಬಾಹೋ
ನಿಗೃಹೀತಾನಿ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಃ
ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ 68

ಆದ್ದರಿಂದ ಅರ್ಜುನ, ಯಾರ ಇಂದ್ರಿಯಗಳು ಎಲ್ಲ ಬಗೆಯ ವಿಷಯಗಳಿಂದಲೂ ಪಾರಾಗಿ ಅಂತರ್ಮುಖವಾಗಿವೆಯೋ ಅವನ ಪ್ರಜ್ಞೆ ಸ್ಥಿರವಾಗಿರುತ್ತದೆ.

ಯಾ ನಿಶಾ ಸರ್ವಭೂತಾನಾಂ
ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗರ್ತಿ ಭೂತಾನಿ
ಸಾ ನಿಶಾ ಪಶ್ಯತೋ ಮುನೇಃ ॥ 69

ಎಲ್ಲ ಪ್ರಾಣಿಗಳಿಗೂ ಯಾವುದು ಇರುಳೋ (ಎಲ್ಲರೂ ಯಾವುದನ್ನು ಕಾಣದೆ ಇರುವರೊ) ಆ (ಆತ್ಮಸ್ವರೂಪದ) ವಿಷಯದಲ್ಲಿ ಯೋಗಿಯು ಎಚ್ಚರವಾಗಿರುವನು. ಎಲ್ಲ ಪ್ರಾಣಿಗಳೂ ಯಾವ ವಿಷಯದಲ್ಲಿ ಎಚ್ಚರವಾಗಿರುವುವೋ (ಎಲ್ಲರೂ ಯಾವುದರದಲ್ಲಿ ವ್ಯವಹರಿಸುತ್ತಿರುವರೋ) ಅದು (ಆ ಪ್ರಪಂಚದ ವಿಷಯವು) ಆತ್ಮಸ್ವರೂಪವನ್ನು ಕಾಣುತ್ತಿರುವವನಿಗೆ ಇರುಳು.

ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥

ಎಲ್ಲ ಕಡೆಯಿಂದಲೂ ನೀರು ಬರುತ್ತಿದ್ದರೂ ಅಲ್ಲಾಡದೆ ನೆಲೆಯಾಗಿರುವ ಸಮುದ್ರವನ್ನು ಹೊರಗಣ ನೀರುಗಳು ಹೇಗೆ ಸೇರಿಹೋಗುವುವೋ ಹಾಗೆ ಬಯಕೆಗಳೆಲ್ಲ ಯಾವನೊಳಗೆ ಸೇರಿಹೋಗುವುವೋ ಅವನು ಶಾಂತಿಯನ್ನು ಪಡೆಯುತ್ತಾನೆ. ಬಯಕೆಗಳ ಬೆನ್ನು ಹತ್ತುವವನಿಗೆ ಎಂದೂ ಶಾಂತಿಯಿಲ್ಲ.

ವಿಹಾಯ ಕಾಮಾನ್ ಯಃ
ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಃ
ಸ ಶಾಂತಿಮಧಿಗಚ್ಛತಿ ॥ 71

ನಿಸ್ಪೃಹತೆಯಿಂದ ವಿಷಯಗಳನ್ನು ತ್ಯಾಗಮಾಡಿ ನಾನು ನನ್ನದು ಎನ್ನುವ ಭಾವವಿಲ್ಲದೆ ಬಂದದ್ದನ್ನು ಭೋಗಿಸುವವನು ಶಾಂತಿಯನ್ನು ಪಡೆಯುತ್ತಾನೆ.

ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ
ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಽಸ್ಯಾಮಂತಕಾಲೇಽಪಿ
ಬ್ರಹ್ಮನಿರ್ವಾಣಮೃಚ್ಛತಿ ॥ 72

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಸಾಂಖ್ಯಯೋಗೋನಾಮ
ದ್ವಿತೀಯೋಽಧ್ಯಾಯಃ ॥

ಅರ್ಜುನ, ಇದು ಭಗವಂತನಲ್ಲಿ ನೆಲೆಗೊಂಡವನ ಬದುಕಿನ ರೀತಿ. ಈ ಸ್ಥಿತಿಯನ್ನು ಪಡೆದವರು ಮತ್ತೆ ದಾರಿ ತಪ್ಪುವುದಿಲ್ಲ, ಜೀವನದ ಕೊನೆಯ ಕ್ಷಣದ ತನಕವೂ ಇದನ್ನು ಉಳಿಸಿಕೊಂಡವನು ಆನಂದಮಯನಾದ ಭಗವಂತನನ್ನು ಪಡೆಯುತ್ತಾನೆ.

2 ನೆಯ ಅಧ್ಯಾಯವು ಮುಗಿದುದು.

## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಕರ್ನಾಟಕದಲ್ಲಿ

## ಅರ್ಚಕ ಶಿಕ್ಷಣ ಶಿಬಿರ

'ಹಿಂದು ಸಮಾಜದಲ್ಲಿ ದೇವಾಲಯಗಳು ಮಹತ್ವವಾದ ಸ್ಥಾನವನ್ನು ಪಡೆದಿವೆ. ದೇವಾಲಯಗಳ ಅರ್ಚಕರು ಸಮಾಜದಲ್ಲಿ ಹೊಸ ಚೇತನ ಉಂಟುಮಾಡುವುದರಲ್ಲಿ ವಿಶೇಷವಾದ ಪಾತ್ರ ವಹಿಸಬಲ್ಲರು. ಆದರೆ ಇಂದು ದೇವಸ್ಥಾನಗಳು, ಅರ್ಚಕರು, ಸಮಾಜದಲ್ಲಿ ತಮ್ಮ ಸ್ಥಾನ ಕಳೆದು ಕೊಳ್ಳುತ್ತಿರುವ ಸಂದರ್ಭದಲ್ಲಿ ವಿಶ್ವ ಹಿಂದು ಪರಿಷತ್ತು ಸಮಾಜದ ಕೇಂದ್ರವಾದ ದೇವಾಲಯದ ಅರ್ಚಕರಿಗೆ, ಅದರಲ್ಲೂ ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳ ಉಪೇಕ್ಷಿತ ವರ್ಗಗಳ ಅರ್ಚಕರಿಗೆ ಶಿಕ್ಷಣ ನೀಡುತ್ತಿರುವುದು ಅಭಿನಂದನೀಯವಾಗಿದೆ. ಇಂತಹ ಕಾರ್ಯಕ್ರಮಗಳಿಗೆ ಎಲ್ಲರೂ ಬೆಂಬಲನೀಡುವುದು ಅತ್ಯಗತ್ಯ." ಎಂದು ಕರ್ನಾಟಕ ಸರ್ಕಾರದ ಅರಣ್ಯಮಂತ್ರಿಗಳಾದ ಶ್ರೀ ಜಿ. ವಿಜಯ ಅವರು ನುಡಿದರು. ಶ್ರೀಯುತರು ವಿಶ್ವ ಹಿಂದು ಪರಿಷತ್ತಿನ ಆಶ್ರಯದಲ್ಲಿ ಶ್ರೀ ಕ್ಷೇತ್ರ ಆದಿಚುಂಚನಗಿರಿಯಲ್ಲಿ ನಡೆದ ಅರ್ಚಕ ಶಿಕ್ಷಣ ಶಿಬಿರದ ಸಮಾರೋಪ ಸಮಾರಂಭದಲ್ಲಿ ಭಾಷಣ ಮಾಡುತ್ತಿದ್ದರು.

ಇದೇ ಸಂಭರ್ಭದಲ್ಲಿ ಪರಿಷತ್ತಿ ಪ್ರಕಟಣೆಯಾದ 'ಸುಲಭ ಪೂಜಾ ವಿಧಾನ ಮತ್ತು ಸಂಸ್ಕಾರವಿಧಿ' ಎಂಬ ಕಿರುಗ್ರಂಥದ ಬಿಡುಗಡೆ ಮಾಡುತ್ತಾ ಶ್ರೀ ಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರು "ಹಿಂದು ಸಮಾಜದ ಇಂದಿನ ಅವನತಿಗೆ ಮೂಲಕಾರಣ, ನಾವು ದೇವಸ್ಥಾನಗಳನ್ನು ಉಪೇಕ್ಷಿಸಿರುವುದೇ ಆಗಿದೆ. ದೇವಾಲಯಗಳು ಹಿಂದು ಸಮಾಜದ ಎಲ್ಲ ಚಟುವಟಿಕೆಗಳ ಕೇಂದ್ರ ಆಗಬೇಕು. ಹಾಗಾಗಬೇಕಾದರೆ ಅದರಲ್ಲಿ ಅರ್ಚಕ ಬಹು ಪ್ರಮುಖವಾದ ಪಾತ್ರ ವಹಿಸಬೇಕು. ಅರ್ಚಕನ ಅಂತರಂಗ ಬಹಿರಂಗ ಶುದ್ಧಿಗಳಾದರೆ, ದೇವಾಲಯದ ಅಂತರಂಗ ಬಹಿರಂಗಗಳೂ ತಾವೇ ತಾವಾಗಿ ಶುದ್ಧಿಯಾಗುತ್ತವೆ. ಎಷ್ಟೋ ದೇವಾಲಯಗಳ ಅರ್ಚಕರು, ಯಾವುದೇ ಶಿಕ್ಷಣವಿಲ್ಲದೆ ಮಂತ್ರಗಳಿಲ್ಲದೆ ಕೇವಲ ಅನನ್ಯ ಭಕ್ತಿಯಿಂದ ಪೂಜೆ ಮಾಡುತ್ತಿದ್ದಾರೆ. ಅವರ ಭಕ್ತಿಯಿಂದಲೇ ನಮ್ಮ ದೇವಾಲಯಗಳೂ ಇನ್ನೂ ಅಸ್ತಿತ್ವ ಅದರೂ ತಮ್ಮ ಸ್ಥಾನವನ್ನು ಉಳಿಸಿಕೊಂಡಿವೆ. ಆದರೆ ಮಂತ್ರ ಸಹಿತವಾದ ಶಾಸ್ತ್ರೋಕ್ತವಾದ ಪೂಜೆ ಮಾಡುವುದನ್ನು ಈ ಅರ್ಚಕರಿಗೆ ಕಲಿಸುವುದು ಅಗತ್ಯವಾಗಿದೆ. ವಿಶ್ವ ಹಿಂದು ಪರಿಷತ್ತು ಈ ಕಾರ್ಯವನ್ನು ಕೈಗೆತ್ತಿಕೊಂಡು, ಬಹುದಿನಗಳ ಕೊರತೆಯನ್ನು ಪೂರೈಸುತ್ತಿದೆ. ಇಂತಹ ಶಿಬಿರಗಳು ಇನ್ನೂ ಹೆಚ್ಚು ಸಂಖ್ಯೆಯಲ್ಲಿ ನಡೆಯುವಂತಾಗಲಿ'' ಎಂದು ಹಾರೈಸಿದರು.

ಶ್ರೀ ನ. ಕೃಷ್ಣಪ್ಪನವರು 'ಅರ್ಚಕನ ಸ್ಥಾನ ಬಹಳ ಹಿರಿದಾದುದು– "ಅರ್ಚಕಸ್ಯ ಪ್ರಭಾವೇನ ಶಿಲಾ ಭವತಿ ಶಂಕರಃ'' ಎಂಬಂತೆ ಕಲ್ಲಿನಲ್ಲಿ ದೈವತ್ವವನ್ನು ತುಂಬಿ, ಸಾಮಾನ್ಯರನ್ನೂ ದೈವತ್ವದ ಕಡೆಗೆ ಒಯ್ಯುವ ಆತನ ಹಿರಿಮೆ ಅಪಾರ, ಇಂತಹ ಅರ್ಚಕರನ್ನು ತರಬೇತು ಮಾಡುವ ವಿಶ್ವ ಹಿಂದು ಪರಿಷತ್ತಿನ ಕಾರ್ಯ ತುಂಬ ಸ್ತುತ್ಯಾರ್ಹವಾದುದು' ಎಂದರು.

ಅಧ್ಯಕ್ಷತೆ ವಹಿಸಿದ್ದ ಆದಿಚುಂಚನಗಿರಿ ಮಠಾಧೀಶರಾದ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳವರು " ಶುದಾಂತಃಕರಣದಿಂದ ಅರ್ಚನ ವೃತ್ತಿಯನ್ನು ನಾವು ಕೈಕೊಳ್ಳಬೇಕು. ಹಾಗಾದರೆ ಮಾತ್ರ ಧರ್ಮವು ಸುವ್ಯವಸ್ಥಿತವಾಗಿ ನಿಲ್ಲಲು ಸಾಧ್ಯವಾಗುತ್ತದೆ. ಅರ್ಚಕರು, ತಮ್ಮ ಬಳಿಗೆ ಬರುವ ಭಕ್ತರ ಸಂಕಷ್ಟಗಳನ್ನು ನಿವಾರಿಸಬಲ್ಲಂತೆ ಸಮಾಧಾನವನ್ನೂ ಹೇಳುವಂತಹವರಾಗಬೇಕು. ಪರಮಾತ್ಮನ ಅನುಗ್ರಹವನ್ನು ಭಕ್ತರ ಮೇಲೆ ತೈಲಧಾರೆಯಂತೆ ಹರಿಸುವಂತೆ ಆಗಬೇಕು. ಅರ್ಚಕರು ತಮ್ಮ ಶಿಕ್ಷಣದ ಈ ಅವಧಿಯನ್ನು ಸದುಪಯೋಗ ಮಾಡಿಕೊಳ್ಳಬೇಕು'' ಎಂದು ತಿಳಿಸಿದರು.

ಪ್ರಾರಂಭದಲ್ಲಿ ಶಿಬಿರಾಧಿಕಾರಿಗಳಾದ,ಸಂಸ್ಕೃತ ಪಾಠಶಾಲೆಯ ಪ್ರಾಂಶುಪಾಲ ವಿದ್ವಾನ್ ಶ್ರೀ ಅಶ್ವತ್ಥಯ್ಯನವರು ಸ್ವಾಗತ ಮಾಡಿದರು. ವಿಶ್ವ ಹಿಂದು ಪರಿಷತ್ತಿನ ಪ್ರಾಂತೀಯ ಸಂಘಟನಾ ಕಾರ್ಯದರ್ಶಿ ಶ್ರೀ ಸದಾನಂದ ಕಾಕಡೆಯವರು ಪರಿಷತ್ತಿನ ಕಾರ್ಯಚಟುವಟಿಕೆಗಳ ಸ್ಥೂಲ ವರದಿಯನ್ನು ನೀಡಿ "ವಿಶ್ವದ 70 ಕೋಟಿ ಹಿಂದುಗಳ ಸಂಘಟನೆಯೇ ನಮ್ಮ ಗುರಿ'' ಎಂದರು. ನಾಗಮಂಗಲದ ಶಾಸಕರಾದ ಶ್ರೀ ಚಿಗರೀಗೌಡರೂ ಮಾತನಾಡಿದರು. ಶಿಬಿರದ ನಿರ್ದೇಶಕರಾದ ಶ್ರೀ ಹೋ. ಅ. ನರಸಿಂಹಮೂರ್ತಿ ಅಯ್ಯಂಗಾರ್ಯರು ಶಿಬಿರದ ಉದ್ದೇಶವನ್ನು, ವರದಿಯನ್ನೂ ನೀಡಿದರು. ತುರುವೇಕೆರೆ ಶಾಸಕರಾದ ಶ್ರೀ ಬೈರಪ್ಪಾಜಿಯವರು ಆಭಾರ ಮನ್ನಿಸಿದರು.

ಅರ್ಚಕ ಶಿಕ್ಷಣ ಶಿಬಿರ ನಡೆದಿದ್ದು ಶ್ರೀ ಕ್ಷೇತ್ರ ಆದಿಚುಂಚನಗಿರಿಯಲ್ಲಿ, ಮಯೂರಗಿರಿಯೆಂದು ಪ್ರಖ್ಯಾತವಾಗಿರುವ ನಯನ ಮನೋಹರವಾದ ಈ ಅಭಯಾರಣ್ಯದ ಮೇಲಿರುವ ಶ್ರೀ ಕಾಲಭೈರವೇಶ್ವರ ಸಂಸ್ಕೃತ ವೇದಾಗಮ ಪಾಠಶಾಲೆಯಲ್ಲಿ ಅರ್ಚಕರು ತರಬೇತಿ ಪಡೆದರು. ಹಳೆಯ ಗುರುಕುಲಗಳ ಕಲ್ಪನೆ ಮೂಡಿಸುತ್ತಿದ್ದ ಈ ಶಿಬಿರದ ಉದ್ಘಾಟನೆಯಾದದ್ದು ಶ್ರೀ ಪೇಜಾವರ ಸ್ವಾಮೀಜೀಯವರಿಂದ. ಪೂಜ್ಯ ಶ್ರೀಪಾದಂಗಳವರು "ಭಕ್ತಿಯ ಪ್ರಚಾರ ಮತ್ತು ಪ್ರಸಾರಗಳಿಂದ, ಧರ್ಮ ಜಾಗೃತಿಯುಂಟಾಗಿ ಭವ್ಯ ಸಮಾಜವು ರೂಪುಗೊಳ್ಳುತ್ತದೆ. ಅರ್ಚಕರು ಮಂತ್ರಾರ್ಥಗಳನ್ನು ತಿಳಿದಂತಹವರಾಗಿ, ಆಚಾರವಂತರಾಗಿ ಪೂಜಾ ಕೈಂಕರ್ಯವನ್ನು ನಡೆಸಿಕೊಂಡು ಬರಬೇಕು. ದೇವರಿಗೆ ಜಾತಿ ಮುಖ್ಯವಲ್ಲ. ಭಕ್ತಿ ಮುಖ್ಯ. ಶಬರಿಯು ಬೇಡರ ಜಾತಿಯವಳಾದರೂ ಶ್ರೀರಾಮನು ಅವಳ ಅಪಾರವಾದ ಭಕ್ತಿಗೆ ಮೆಚ್ಚಿ ಅವಳನ್ನು ಅನುಗ್ರಹಿಸಿದನು'' ಎಂದು ತಿಳಿಸಿದರು.

ಈ ಶಿಬಿರದಲ್ಲಿ ಕರ್ನಾಟಕ ಪ್ರಾಂತದ ಗ್ರಾಮಾಂತರ ಪ್ರದೇಶಗಳಿಂದ ಸುಮಾರು 60 ಅರ್ಚಕರು ಭಾಗವಹಿಸಿದ್ದರು. ಇದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉಪೇಕ್ಷಿತ ವರ್ಗಕ್ಕೆ ಸೇರಿದ ಬಾಂಧವರು. ಶಿಬಿರದಲ್ಲಿ ಸಂಕ್ಷಿಪ್ತ ಪೂಜಾ ಪದ್ಧತಿ, ಬೇರೆ ಮತಗಳಿಂದ ಹಿಂದೂ ಧರ್ಮಕ್ಕೆ ಬರಲು ಇಚ್ಛಿಸುವವರನ್ನು ಬರಮಾಡಿಕೊಳ್ಳುವ ಪರಾವರ್ತನ ವಿಧಿ, ಹೊಸ ಮನೆಯನ್ನು ಕಟ್ಟುವ ಮುನ್ನ ಮಾಡಬೇಕಾದ ಭೂಮಿ ಪೂಜೆ, ಹೊಸ ಮನೆಯ ಗೃಹಪ್ರವೇಶ, ನಾಮಕರಣ, ವಿವಾಹ

(40ನೇ ಪುಟ ನೋಡಿ)

# ವಾರ್ತಾಲಹರಿ

## ತಿರುಪತಿಯಲ್ಲಿ ಯಾತ್ರಿಕರಿಗಾಗಿ ಸಮಾಚಾರ ಕೇಂದ್ರಗಳು

ದಿನದಿನವೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ದೇಶದ ನಾನಾಭಾಗಗಳಿಂದ ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಲು ಬರುವ ಯಾತ್ರಿಕರಿಗೆ, ತಿರುಮಲೆ ದೇವಾಲಯದ ಸಂದರ್ಶನಾವಕಾಶಗಳು ಅಲ್ಲಿ ಮಾಡಲಾಗುವ ಪೂಜಾವಿವರಗಳು, ಯಾತ್ರಿಕರು ಮಾಡಬಹುದಾದ ಸೇವೆ, ಕೈಂಕರ್ಯಗಳು, ತಿರುಪತಿ ಹಾಗೂ ತಿರುಮಲೆಯಲ್ಲಿನ ವಸತಿಸೌಕರ್ಯ, ಆಹಾರ ಪಾನೀಯ ಸೌಲಭ್ಯ, ಸುತ್ತ ಮುತ್ತಣ ಇನ್ನಿತರ ಪ್ರೇಕ್ಷಣೀಯ, ಸಂದರ್ಶನೀಯ ದೇವಾಲಯಗಳು–ಇತ್ಯಾದಿಗಳ ಬಗ್ಗೆ ವಿವರಗಳನ್ನು ನೀಡುವ ಉದ್ದೇಶದಿಂದ ತಿರುಪತಿಯ ವಿವಿಧ ಸ್ಥಳಗಳಲ್ಲಿ ಸಮಾಚಾರ ಕೇಂದ್ರಗಳನ್ನು ತೆರೆಯಲಾಗುತ್ತಿದೆ. ಆದರಂತೆ ಈಗಾಗಲೇ ರೇಣಿಗುಂಟೆ – ತಿರುಪತಿಯ ವಿಮಾನನಿಲ್ದಾಣದಲ್ಲಿ, ಅಲಿಪಿರಿಯಲ್ಲಿ ಸಮಾಚಾರಕೇಂದ್ರಗಳು ಆರಂಭವಾಗಿ ನಡೆಯುತ್ತಿವೆ. ಈಚೆಗೆ ತಿರುಪತಿಯ ರೈಲ್ವೆ ನಿಲ್ದಾಣದಲ್ಲಿ ಹಾಗೂ ತಿರುಪತಿಯ ಆರ್. ಟಿ. ಸಿ. ಬಸ್ ನಿಲ್ದಾಣದಲ್ಲಿ ಸಮಾಚಾರ ಕೇಂದ್ರಗಳನ್ನು ಆರಂಭಿಸಲು ಎಲ್ಲ ಪ್ರಯತ್ನಗಳನ್ನೂ ಮಾಡಲಾಗುತ್ತಿದೆ.

ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರ ಸ್ವಾಮಿ ರೆಡ್ಡಿ ಅವರು ಯಾತ್ರಿಕರ ಪರಿಪೂರ್ಣ ಸೌಕರ್ಯವೇ ದೇವಸ್ಥಾನಗಳ ಉದ್ದೇಶವೆಂದೂ ಯಾತ್ರಿಕರು ತಿರುಪತಿಯ ಯಾತ್ರೆ ಒಂದು ಮರೆಯಲಾಗದ ಮಧುರ ನೆನಪನ್ನಾಗಿ ಜೀವನ ಪರ್ಯಂತ ಹೊಂದುವಂತೆ ಮಾಡುವುದು ತಿ. ತಿ. ದೇವಸ್ಥಾನಗಳ ಆದರ್ಶವೆಂದೂ, ಹೇಳುತ್ತಿದ್ದ ಮಾತಿಗೆ ಅನುಗುಣವಾಗಿ ಈ ಏರ್ಪಾಡುಗಳು ನಡೆದಿವೆ.

ಭಾರತದ ವಿವಿಧ ನಗರಗಳಲ್ಲಿ–ಬೆಂಗಳೂರು, ಮದರಾಸು, ದೆಹಲಿ, ಹೈದರಾಬಾದ್, ಬೊಂಬಾಯಿ, ಗಳಲ್ಲಿ ಹಾಗೂ ಇತರ ತೀರ್ಥ ಕ್ಷೇತ್ರಗಳಲ್ಲಿ ಶ್ರೀಶೈಲ, ಗುರುವಾಯೂರು, ಶೃಂಗೇರಿ, ಮೊದಲಾದೆಡೆಗಳಲ್ಲಿ ಇಂತಹ ಸಮಾಚಾರ ಕೇಂದ್ರಗಳು ಕೆಲಸಮಾಡುತ್ತಿವೆಯೆಂಬುದನ್ನು ಓದುಗರು ನೆನೆಯಬಹುದು. ಯಾತ್ರಿಕರು ಸೌಲಭ್ಯಕಾಗಿಯೇ ತಿರುಪತಿ–ತಿರುಮಲೆ ದೇವಸ್ಥಾನಗಳ ಸೇವಾ, ವಸತಿ ವಿವರಗಳನ್ನು ಒಳಗೊಂಡ ಯಾತ್ರಿಕ ಮಾರ್ಗದರ್ಶಿ ಪುಸ್ತಿಕೆ (ಡೆಮಿ 1/16, 48 ಪುಟ) ಆಂಗ್ಲ, ತಮಿಳು, ಕನ್ನಡ ತೆಲುಗು ಹಿಂದಿಗಳಲ್ಲಿ ಪ್ರಕಟವಾಗಿ ಉಚಿತವಾಗಿ ಹಂಚಲ್ಪಡುತ್ತಿವೆ ಎಂಬುದೂ ಈ ದಿಸೆಯಲ್ಲಿ ಗಮನಿಸತಕ್ಕ ಅಂಶವಾಗಿದೆ.

## ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ಕಡಪ ಜಿಲ್ಲೆಯ ಬದ್ವೇಲು ತಾಲ್ಲೂಕಿನ ಮುಡುಮಲೆ ಹಳ್ಳಿಯ ಶ್ರೀಸಿದ್ಧಯ್ಯಸ್ವಾಮಿ ಮಠದ ಬಳಿ ಉಚಿತವಾಗಿ ನಿವೇಶನವನ್ನು ನೀಡಿದಲ್ಲಿ ಒಂದು ಲಕ್ಷರೂಗಳಿಗೆ ಮೀರದ ವೆಚ್ಚದಲ್ಲಿ ಯಾತ್ರಿಕರಿಗಾಗಿ ಸತ್ರವನ್ನು ನಿರ್ಮಿಸಲು ತೀರ್ಮಾನಿಸಲಾಯಿತು. ಸದರಿ ಮಠದಲ್ಲಿ ಸುಮಾರು 400 ವರ್ಷಗಳಿಗೂ ಹಿಂದಿನಿಂದ ಸಂಗ್ರಹಿತವಾಗಿರುವ ತಾಳೆಯೋಲೆಯ ಗ್ರಂಥಗಳನ್ನು ಪರಿಶೀಲಿಸಿ, ಅವುಗಳ ಪ್ರಕಟನೆಯಲ್ಲಿ ನೆರವು ನೀಡಲು ತೀರ್ಮಾನಿಸಲಾಯಿತು.

* * * *

ಹೈದರಾಬಾದಿನಲ್ಲಿನ ಆಂಧ್ರಪ್ರದೇಶ ಮುಜರಾಯಿ ಇಲಾಖೆಯವರ ಶಿಲ್ಪಕಲಾಶಾಲೆಯ ವಾರ್ಷಿಕ ವೆಚ್ಚಗಳಿಗಾಗಿ 82–83 ಸಾಲಿಗೆಂದು ರೂ 50000–00 ಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ವಸತಿ ಗೃಹದಾನಿಗಳು ಅಥವಾ ಅವರ ಬಂಧುಗಳಿಗಾಗಿ, ಅವರು ದಾನ ನೀಡಿದ ಗೃಹದಲ್ಲಿ ಉಳಿಯಲು ಒಂದು ವರ್ಷಕ್ಕೆ 60 ದಿನಗಳು ಈ ಮುನ್ನ ಗೊತ್ತುಪಡಿಸಲಾಗಿದ್ದು, ಈ ನಿಯಮಕ್ಕೆ ವರ್ಷಕ್ಕೆ 'ಅರವತ್ತುದಿನ ಉಳಿದುಕೊಳ್ಳಬಹುದಾದರೂ ಒಂದು ಬಾರಿಗೆ ಹತ್ತು ದಿನಕ್ಕೆ ಮೀರಬಾರದು' ಎಂದು ತಿದ್ದುಪಡಿ ಮಾಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇವಸ್ಥಾನಗಳ ವಿದ್ಯುತ್ ಇಲಾಖೆಗಾಗಿ ಒಬ್ಬ ವಿಭಾಗೀಯ ವಿದ್ಯುತ್ ಇಂಜನೀಯರ್ ಹುದ್ದೆಯನ್ನು ಆರಂಭದಲ್ಲಿ ಒಂದು ವರ್ಷದ ಅವಧಿಗಾಗಿ ಉಂಟುಮಾಡಲು ತೀರ್ಮಾನಿಸಲಾಯಿತು.

* * * *

ತಿರುಪತಿಯಲ್ಲಿ ತಿ. ತಿ. ದೇ. ಗಳಿಂದ ಆರಂಭವಾಗಿರುವ ಅಂಗವಿಕಲರ ತರಬೇತಿ–ಉತ್ಪಾದನಾ ಕೇಂದ್ರದ ಉತ್ಪಾದನಾ ವಿಭಾಗದ ಮ್ಯಾನೇಜರ್ ಹುದ್ದೆಗೆ ನಿಯಮಿತರಾದ ಶ್ರೀ ಟಿ. ಆರ್. ಸುಬ್ರಹ್ಮಣ್ಯಂ ಅವರಿಗೆ ವಯೋಮಿತಿಯ ವಿನಾತಿಯನ್ನು ನೀಡಲು ತೀರ್ಮಾನಿಸಲಾಯಿತು. ★

## ದೇವಾಲಯ ಪುರಾತತ್ತ್ವ ವಸ್ತು ಸಂಗ್ರಹಾಲಯ

ತಿರುಪತಿಯ ಶ್ರೀ ಗೋವಿಂದ ರಾಜಸ್ವಾಮಿ ದೇವಾಲಯದ ಬಲಬದಿಯ ಶ್ರೀ ನಮ್ಮಾಳ್ವಾರ್ ಗುಡಿಯಲ್ಲಿ ತಿ. ತಿ. ದೇವಸ್ಥಾನಗಳ 'ದೇವಾಲಯ ಪುರಾತತ್ತ್ವ ವಸ್ತು ಸಂಗ್ರಹಾಲಯ' ಏರ್ಪಾಡಾಗಿದೆ. ಇದರಿಂದಾಗಿ ಭಾರತದ ವಸ್ತು ಸಂಗ್ರಹಾಲಯಗಳ ಚರಿತ್ರೆಯಲ್ಲೇ ಮೊದಲಬಾರಿಗೆ ಹಿಂದೂ ಧರ್ಮದ ಬಗ್ಗೆ ಹಾಗೂ ಅದರ ವಾಸ್ತು, ಶಿಲ್ಪ, ಹಬ್ಬಹರಿದಿನಗಳು, ಆಚಾರ, ಕಲೆಗಳ ಬಗ್ಗೆ ವಿವರಗಳನ್ನು ನೀಡುವ ವಸ್ತು ಸಂಗ್ರಹಾಲಯ ಉಂಟಾದಂತಾಗಿದೆ.

ತಿ. ತಿ. ದೇ. ಗಳ ಶ್ರೀ ವೆಂಕಟೇಶ್ವರ ದೇವಾಲಯ ಕಲಾವಸ್ತು ಸಂಗ್ರಹಾಲಯವು ವೈಷ್ಣವ ತತ್ತ್ವದ ಹಿರಿಮೆ, ಗರಿಮೆ, ಮೂಲ, ಬೆಳವಣಿಗೆಗಳನ್ನು ಚಿತ್ರೀಕರಿಸುವ ಪ್ರಯತ್ನವಾಗಿದೆ. ವಿಷ್ಣುವನ್ನು ಕೇಂದ್ರವನ್ನಾಗಿ ಹೊಂದಿ ವೇದಕಾಲೀನ ಇತಿಹಾಸದಿಂದಾರಂಭವಾದ

ವೈಷ್ಣವ ತತ್ತ್ವದ ವೈಖಾನಸ ಪಾಂಚರಾತ್ರ ಆಗಮಗಳ ಮೂಲಕ ಆದ ಬೆಳವಣಿಗೆಯನ್ನು ಚಿತ್ರಿಸಿ, ದೇಶದ ಈ ಭಾಗದಲ್ಲಿ ವಿಷ್ಣು ಪೂಜೆ ಹೇಗೆ ಉತ್ತರದಿಂದ ಬೇರೆಯಾಗಿದೆ ಎಂದು ತಿಳಿಸುವ ಒಂದು ವಿಭಾಗವಿದೆ. ಮುಂದಿನ ವರ್ಷಗಳಲ್ಲಿ ಈ ವಿಭಾಗದಲ್ಲಿ ಇಡೀ ದೇಶದಲ್ಲಿನ ವಿಷ್ಣು ರೂಪಗಳನ್ನೂ, ವೈಷ್ಣವರ ಶಿಲ್ಪಗಳನ್ನೂ ತಿಳಿಸಿ ಕೊಡುವಂತೆ ಮಾಡಲಾಗುವುದು.

ಶಿಲ್ಪಶಾಸ್ತ್ರದ ವಿಭಾಗದಲ್ಲಿ ವಿವಿಧ ಆಳತೆಗಳು, ಭೂಮಿ ಲಕ್ಷಣ, ದಿಗ್ದರ್ಶನ ಮೊದಲಾದವು ಶಾಸ್ತ್ರ ರೀತ್ಯಾ ವ್ಯಾವೃತವಾಗಿವೆ.

ವಡಗಲೆ ತೆಂಗಲೆಗಳ ನಡುವಣ ಭೇದವನ್ನು ಅವುಗಳ ಆಚಾರ, ವ್ಯವಹಾರಗಳ ವೈದೃಶ್ಯವನ್ನು ತೋರಿಸುವ ಪಟ್ಟಿಕೆಯಿಂದ ಗುರುತಿಸಲಾಗಿದೆ. ವೈಷ್ಣವ ಆಚಾರದ ಬಗ್ಗೆ ಅಪರಿಚಿತರೂ ಆಸಕ್ತರಾಗುವಂತೆ ಸೂತ್ರಗಳನ್ನು ಚಿತ್ರೀಕರಿಸಲಾಗಿದ್ದು ವೇದಗಳಲ್ಲಿ ವಿವರಿಸಲಾಗಿರುವ ಯಜ್ಞವೇದಿಯಂತೆ ತಿರುಮಲೆ ದೇವಸ್ಥಾನವಿದೆ ಎಂಬುದು ನೋಟಕರು ನಿಂತು ನೋಡುವಂತಾಗಿಸಲಾಗಿದೆ. (ದೇವಾಲಯವನ್ನು ಯಜ್ಞವೇದಿಗೆ ಹೋಲಿಸುವುದು ಪರಂಪರಾಗತವಾಗಿ ಬಂದಿರುವ ಒಂದು ಮೌಲ್ಯ)

ದೇವಾಲಯದಲ್ಲಿ ಅರ್ಚನೆ ಕೈಂಕರ್ಯಗಳಿಗಾಗಿ ಬಹಳಷ್ಟು ಪಾತ್ರೆ ಪರಿಕರಗಳನ್ನು ಬಳಸಲಾಗುತ್ತದೆ. ಅಂತಹ ಪರಿಕರಗಳ ಒಂದು ಸಂಗ್ರಹ ಇಲ್ಲಿರುವುದು ಆಸಕ್ತಿದಾಯಕವಾಗಿದೆ. ನೃತ್ಯದಲ್ಲಿನಂತೆಯೇ ಅರ್ಚನೆಯಲ್ಲೂ ಮುದ್ರೆಗಳು ಪ್ರಮುಖ ಸ್ಥಾನ ವಹಿಸುತ್ತವೆ. ಪಾಂಚರಾತ್ರದ 108 ಮುದ್ರೆಗಳನ್ನು ಚಿತ್ರಗಳ ಮೂಲಕ ಇಲ್ಲಿ ಪ್ರದರ್ಶಿಸಲಾಗಿದೆ.

ವಿಷ್ಣುವಿನ ವಾಹನಗಳಿಗಾಗಿಯೇ ಒಂದು ವಿಭಾಗವನ್ನು ತೆರೆಯಲಾಗಿದೆ.

ವೈಷ್ಣವ ತತ್ತ್ವವನ್ನು ವ್ಯಾಪಕಗೊಳಿಸಿದ ಹರಿದಾಸರ ಚಿತ್ರಗಳಿಗಾಗಿ ಒಂದು ಪ್ರತ್ಯೇಕ ವಿಭಾಗವಿದೆ.

ಈ ವಸ್ತು ಸಂಗ್ರಹಾಲಯದಲ್ಲಿ 100 ಕ್ಕೂ ಮಿಕ್ಕಿದ ಶಿಲ್ಪಗಳೂ 150 ಕ್ಕೂ ಮೀರಿದ ಮರಗೆತ್ತನೆ ಕೃತಿಗಳೂ ಇವೆ. ಪ್ರದರ್ಶಿತವಾಗುವ ವಸ್ತುಗಳಲ್ಲಿ ರೇಖಾಚಿತ್ರಗಳು, ತೈಲಚಿತ್ರಗಳೂ, ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ಮಾದರಿ ಕೃತಿಗಳೂ ಇವೆ.

ಶ್ರೀ ವೇಟೂರಿ ಪ್ರಭಾಕರಶಾಸ್ತ್ರಿ ಹಾಗೂ ಶ್ರೀ ಕೃಷ್ಣರಾವ್ ಇವರ ಸಂಗ್ರಹಿತವಾದ ಕೃತಿಗಳೂ ಪ್ರದರ್ಶಿತವಾಗಿವೆ.

ಈ ಸಂಗ್ರಹಾಲಯದ ಪ್ರಮುಖ ಶಿಲ್ಪಕೃತಿಯೆಂದರೆ ಶ್ರೀ ಸೂರ್ಯನಾರಾಯಣಸ್ವಾಮಿ. ಕ್ಷತಕವಾದ ಕೋಳವೊಂದನ್ನು ಅದಕ್ಕಾಗಿಯೇ ನಿರ್ಮಿಸಿ ಎತ್ತರವಾದ ಪೀಠದಮೇಲೆ ನಡೆಯುತ್ತ ನಿಂತಿರುವಂತೆ ಇರುವ ಈ ಮೂರ್ತಿ ಬಹು ಆಕರ್ಷಕವಾಗಿದೆ. ಜೊತೆಗೇ ತ್ರಿವಿಕ್ರಮ, ಪಾಂಡುರಂಗವಿಠಲ. ಶ್ರೀದೇವಿ, ಭೂದೇವಿಯರ ಮೂರ್ತಿಗಳೂ ಚಿತ್ತಾಪಹಾರಿಯಾಗಿ, ನೋಟಕರನ್ನು ಚಣಕಾಲ ನಿಲ್ಲಿಸುವಂತಹ ಶಿಲ್ಪಗಳಾಗಿವೆ.

ಪ್ರದರ್ಶನದಲ್ಲಿರುವ ಇನ್ನಿತರ ಕೆಲವು ಶಿಲ್ಪಗಳಿಂದ ಗರುಡ, ಚಕ್ರತ್ತಾಳ್ವಾರ್ ಮೊದಲಾದವು, ಹಲವು ಹನ್ನೊಂದು ರೀತಿಯ ಕಿರೀಟಗಳು–ಕಿರೀಟ ಮುಕುಟ, ಕರಂಡಮುಕುಟ, ಶಿರಸ್ತ್ರಕ ಮುಕುಟ ಮೊದಲಾದವೂ, ಕುಂತಲ, ಕೇಶಬಂಧ ಧಮ್ಮಿಲ್ಲ, ಅಲಕ, ಮೊದಲಾದ ತಲೆಗೂದಲ ಅಲಂಕಾರಗಳನ್ನೂ ವಿವರಿಸಲಾಗಿದೆ. ರಕ್ತಚಂದನವೆಂದು ಹೆಸರಿಸಲ್ಪಟ್ಟ ಕೆಂಪು ಗಂಧದ ಮರದ ಕೆತ್ತನೆಗಳಿಗೆ ತಿರುಚಾನೂರು ಪ್ರಸಿದ್ಧ. ಮರಗೆತ್ತನೆಗಳಲ್ಲಿ ಗಜೇಂದ್ರ ಮೋಕ್ಷ ಮೊದಲಾದುವು ಆಕರ್ಷಕವಾಗಿವೆ.

ತೆಂಗಲೆ ವಡಗಲೆ ನಾಮದ ಭೇದಾಭಿಪ್ರಾಯಕ್ಕೆ ಮೊದಲಿನ ಶ್ರೀವೆಂಕಟೇಶ್ವರಸ್ವಾಮಿಯನ್ನು ಇಲ್ಲಿನ ತೈಲಚಿತ್ರ ಯಶಸ್ವಿಯಾಗಿ ಚಿತ್ರೀಕರಿಸಿದೆ.

——

## ಸಂಕ್ಷಿಪ್ತ ಸಮಾಚಾರ ದರ್ಶಿನಿ

ತಿ. ತಿ. ದೇವಸ್ಥಾನಗಳು ತಮ್ಮ ದೊಡ್ಡ ಕಲ್ಯಾಣ ಮಂಟಪಗಳಿರುವ ಕಡೆಗಳಲ್ಲಿ ಮಧ್ಯಮ ಕನಿಷ್ಟ ವರ್ಗದ ಜನತೆಯ ಬಳಕೆಗಾಗಿ ಕಿರಿಯ ಕಲ್ಯಾಣ ಮಂಟಪಗಳನ್ನು ನಿರ್ಮಾಣ ಮಾಡುವಲ್ಲಿ ಕೆಳಕಂಡ ನೀತಿಯನ್ನು ಅನುಸರಿಸಲು ತೀರ್ಮಾನಿಸಲಾಯಿತು.

1) ರಾಜ್ಯಗಳ ರಾಜಧಾನಿಗಳಲ್ಲಿನ ಕಲ್ಯಾಣ ಮಂಟಪಗಳ ನಿರ್ಮಾಣ ವೆಚ್ಚ ರೂ. 25 ಲಕ್ಷಗಳಾಗಿರಬೇಕು.

2) ಜಿಲ್ಲಾ ಕೇಂದ್ರಗಳಲ್ಲಿನ ಕಲ್ಯಾಣ ಮಂಟಪ ನಿರ್ಮಾಣದಲ್ಲಿ ವೆಚ್ಚ ರೂ. 15 ಲಕ್ಷಕ್ಕೆ ಸೀಮಿತವಾಗಿರಬೇಕು.

3) ಜಿಲ್ಲಾ ಕೇಂದ್ರಗಳಲ್ಲದ ಸಾಕಷ್ಟು ಜನಸಂಖ್ಯೆಯ ತಾಲ್ಲೂಕು ಕೇಂದ್ರ ಅಥವಾ ಪಟ್ಟಣಗಳಲ್ಲಿ ಈ ವಂತಿಗೆ ರೂ. 1.5 ಲಕ್ಷಗಳಿಗೆ ಸೀಮಿತವಾಗಿದ್ದು ಒಂದು ಎಕರೆಗೆ ಕಡಿಮೆಯಾಗದ ನಿವೇಶನ ಉಚಿತವಾಗಿ ದೊರಕುವಂತಿದ್ದು, ಇಡೀ ಕಲ್ಯಾಣ ಮಂಟಪದ ನಿರ್ಮಾಣ ವೆಚ್ಚ ರೂ. 7.5 ಲಕ್ಷಗಳಿಗೆ ಸೀಮಿತವಾಗಿರಬೇಕು.

4) ಹಿರಿಯ ಕಲ್ಯಾಣ ಮಂಟಪವಿರುವ ಸ್ಥಳಗಳಲ್ಲಿ (ಜಿಲ್ಲಾಕೇಂದ್ರ ಅಥವಾ ರಾಜಧಾನಿಗಳಲ್ಲಿ) ಕಿರಿಯ ಕಲ್ಯಾಣ ಮಂಟಪಗಳು ಅದೇ ಆವರಣದಲ್ಲಿದ್ದು ನಿರ್ಮಾಣ ವೆಚ್ಚ ರೂ. 5 ಲಕ್ಷಕ್ಕೆ ಮೀರಬಾರದು.

× × ×

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಶುಕ್ರವಾರ ಅಭಿಷೇಕ ಸಮಯದಲ್ಲಿ ರೂ 2–00 ಟಿಕೆಟ್‌ನಿಂದ ದರ್ಶನಕ್ಕೆ ಯಾತ್ರಿಕರಿಗೆ ಅವಕಾಶ ನೀಡಲು ತೀರ್ಮಾನಿಸಲಾಯಿತು.

× × ×

ವಿಜಯವಾಡದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣ ಮಾಡಲು ತೀರ್ಮಾನಿಸಲಾಯಿತು.

## 1983

# ಆಗಸ್ಟ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 2 | ಮಂಗಳವಾರ | ಆಂಡಾಳ್ ತಿರುವಾಡಿಪ್ಪೂರಂ ಉತ್ಸವಾರಂಭ |
| 9 | ಮಂಗಳವಾರ | ಮಂಗಳಗೌರೀ ವ್ರತಾರಂಭ |
| 13 | ಶನಿವಾರ | ಗರುಡಪಂಚಮಿ, ಋಗ್ವೇದ ಉಪಾಕರ್ಮ |
| 15 | ಸೋಮವಾರ | ಸ್ವಾತಂತ್ರ್ಯ ದಿನಾಚರಣೆ |
| 17 | ಬುಧವಾರ | ಸಿಂಹ ಸಂಕ್ರಮಣ |
| 18 | ಗುರುವಾರ | ಶ್ರೀ ವೆಂಕಟೇಶ್ವಸ್ವಾಮಿ ಪವಿತ್ರೋತ್ಸವ ಅಂಕುರಾರ್ಪಣೆ |
| 19 | ಶುಕ್ರವಾರ | ವರಲಕ್ಷ್ಮೀ ವ್ರತ, ಶ್ರೀ ವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ ಆರಂಭ |
| 21 | ಭಾನುವಾರ | ಪವಿತ್ರೋತ್ಸವ ಸಮಾರೋಪ |
| 23 | ಮಂಗಳವಾರ | ಯಜುರ್ವೇದ ಪ್ರಾಚೀನ ಪಟೂಪಾಕರ್ಮ |
| 24 | ಬುಧವಾರ | ಗಾಯತ್ರೀ ಜಪ |
| 31 | ಬುಧವಾರ | ಗೋಕುಲಾಷ್ಟಮಿ |

ಮುಂದಿನ ಸಂಚಿಕೆಯಲ್ಲಿ ·

**ಸಪ್ತಗಿರಿ ಅಗಸ್ಟ್ — 1983**

**ವೆಂಕಟೇಶ ಸ್ತುತಿ**
— ಜಿ. ಚೆನ್ನಯ್ಯ

**ಶ್ರೀ ಕೃಷ್ಣ ಭಕ್ತಿ**
— ಡಿ. ಕೃಷ್ಣ ಅಯ್ಯಂಗಾರ್

**ನಮ್ಮಾಳ್ವಾರರ ಭಕ್ತಿಮಾರ್ಗ**
— ಡಾ॥ ಎನ್. ಅನಂತರಂಗಾಚಾರ್

**ಕನ್ಯಾಕುಮಾರಿ**
— ಎಚ್. ಕೆ. ಅನಸೂಯಸಂಪತ್

**ಶ್ರೀ ರಾಘವೇಂದ್ರ ಗುರುಸಾರ್ವಭೌಮರು**
— ಕೆ. ವೆಂಕಟರಾಯಾಚಾರ್ಯ

**ಮಾತು**
— ಮತ್ತೀಕೆರೆ ಅನಂತು

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

(37ನೇ ಪುಟ ದಿಂದ)

ಮತ್ತು ಅಂತ್ಯೇಷ್ಟಿ ಈ ಎಲ್ಲಾ ವಿಧಿ – ಸಂಸ್ಕಾರಗಳಲ್ಲಿ ಶಿಕ್ಷಣ ನೀಡಲಾಯಿತು.

ಆದಿಚುಂಚಗಿರಿಯ ಮಠಾಧೀಶ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಈ ಶಿಬಿರದ ಹೊಣೆಗಾರಿಕೆ ವಹಿಸಿಕೊಂಡು, ಭೋಜನ ವಸತಿ ಮತ್ತು ಶಿಕ್ಷಣದ ಸಂಪೂರ್ಣ ವ್ಯವಸ್ಥೆಯನ್ನು ತುಂಬ ವ್ಯವಸ್ಥಿತವಾಗಿ ಮಾಡಿದ್ದರು. ಶ್ರೀ ಕ್ಷೇತ್ರದ ಸಂಸ್ಕೃತ ಕಾಲೇಜಿನ ಪ್ರಾಂಶುಪಾಲರಾದ ವಿದ್ವಾನ್ ಅಶ್ವತ್ಥಯ್ಯನವರು ಶಾಲೆಯ ಅಧ್ಯಾಪಕರುಗಳ ಸಹಾಯ – ಸಹಕಾರದೊಡನೆ ಶಿಕ್ಷಣದ ವ್ಯವಸ್ಥೆ ಮಾಡಿದ್ದರು. ವಿಶ್ವ ಹಿಂದು ಪರಿಷತ್ತಿನ ಪ್ರಾಂತೀಯ ಮಾರ್ಗದರ್ಶಕ ಮಂಡಲಿಯ ಸಂಯೋಜಕರಾದ ಶ್ರೀ ಹೊ. ಅ. ನರಸಿಂಹ ಮೂರ್ತಿ ಅಯಂಗಾರ್ ಅವರು ಶಿಬಿರದ ನಿರ್ದೇಶಕರಾಗಿದ್ದರು. ಪರಿಷತ್ತಿನ ಹಾಸನ ಜಿಲ್ಲೆ ಸಹ – ಕಾರ್ಯದರ್ಶಿ ಶ್ರೀ ಗೋಕರೆ ಸುಬ್ಬರಾಮಯ್ಯನವರು ಶಿಕ್ಷಾರ್ಥಿಗಳಿಗೆ ಭಜನೆ ಶಿಕ್ಷಣ ನೀಡಿದರು.

ಶಿಬಿರವನ್ನು ವೀಕ್ಷಿಸಿದ ಪೂಜ್ಯ ಶ್ರೀ ಅದಮಾರು ಮಠಾಧೀಶರು, ಪೂಜ್ಯ ಶ್ರೀ ಪರಕಾಲ ಮಠಾಧೀಶರೂ, ಪೂಜ್ಯ ಶ್ರೀ ತಣ್ಣೀರು ಮಠಾಧೀಶರೂ, ಪೂಜ್ಯ ಶ್ರೀ ನಾಗಲಿಂಗಸ್ವಾಮಿಗಳು, ಮತ್ತಿತರ ಹಿರಿಯರು, ಶಿಬಿರದ ವ್ಯವಸ್ಥೆಯನ್ನು, ಶಿಕ್ಷಾರ್ಥಿಗಳ ಶ್ರದ್ಧೆ – ಭಕ್ತಿ, ಆಸಕ್ತಿಗಳನ್ನೂ ಕಂಡು ತುಂಬ ಮೆಚ್ಚಿದರು.

---

### ರಕ್ಷಾಪತ್ರ ಚಿತ್ರಸೂಚಿ

ಮುಖ ಪುಟದಲ್ಲಿ : ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ತಿರುಮಲೆ, ಆನಿವರ ಆಸ್ಥಾನ.

ಹಿಂಬದಿಯ ಪುಟ : ಶ್ರೀನಿವಾಸ ಮಂಗಾಪುರದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಸಾಕ್ಷಾತ್ಕಾರ ವೈಭವ.

ಒಳ ರಕ್ಷಾಪುಟಗಳಲ್ಲಿ : ತಿರುಮಲೆಯಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ ಹಾಗೂ ಶ್ರೀ ಕೃಷ್ಣಾಷ್ಟಮಿಯ ಪ್ರಯುಕ್ತ ಶ್ರೀ ವೇಣು ಗೋಪಾಲಸ್ವಾಮಿ.

---

ಅನಿವಾರ್ಯ ಕಾರಣಗಳಿಂದ ಸಪ್ತಗಿರಿ ಪ್ರಕಟನೆಯಲ್ಲಿ ತಡವಾದುದಕ್ಕೆ ಓದುಗರ ಸಹಕಾರವನ್ನು ಕೋರಲಾಗಿದೆ — ಸಂ॥

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

